ಸುಧಾಕರ ಕರ್ಣಾಟಕ ಗ್ರಂಥಾವಳಿ.

ಗ್ರಂಥ ೪.

ಮಹಾತ್ಮ

# ಕಬೀರದಾಸ

(ನಾಟಕ)



ಬೆಳ್ಳಾವೆ ನರಹರಿಶಾಸ್ತ್ರಿ



ಬೆಳ್ಳಾವೆ ಪುಸ್ತಕಾಲಯ.

ಬೆಂಗಳೂರು ನಗರ

೧೯೩೩

ಈ ಗ್ರಂಥಕರ್ತರ ಇತರ ಗ್ರಂಥಗಳು:—

## ನಾಟಕಗಳು.

ಶ್ರೀಕೃಷ್ಣಗಾರುಡಿ

ಶ್ರೀಕೃಷ್ಣಪಾರಿಜಾತ

ಮಾರ್ಕಂಡೇಯ

ಶ್ರೀಕೃಷ್ಣಲೀಲಾವಿನೋದ

ಕಂಸವಧ

ಭೋಜಕಾಳಿದಾಸ

ಭೋಜಕುಮಾರ

---



ರಾಜಭಕ್ತಿಕಾವ್ಯಂ (ಚಂಪು)

ರತ್ನಕುಂಡಲ (ಕಥೆ)

ಕಲ್ಯಾಣಗೀತಮಂಜರಿ (ಹಾಡು)

ಶಾಲಾಸಂವಿಧಾನ (ಉಪಾಧ್ಯಾಯರಿಗೆ)

ಶಾಲಾನೀತ್ಯನುಶಾಸನ ,,



೧೯೩೩

ಪ್ರಕಾಶಕರು:—

ಬೆಳ್ಳಾವೆ ಪುಸ್ತಕಾಲಯ
ಬಳೇಪೇಟೆ ಬೆಂಗಳೂರು ನಗರ.

# ಪೂರ್ವೋಕ್ತಿ.

ಶ್ರೀರಾಮಚಂದ್ರನ ಭಕ್ತನಾದ ಮಹಾತ್ಮ ಕಬೀರದಾಸನ ಚರಿತ್ರವು ಅನೇಕ ವಿಚಿತ್ರಾಶ್ಚರ್ಯ ವಿಷಯಗಳಿಂದ ಕೂಡಿರುವುದಾಗಿ, ಅನೇಕರು ರಚಿಸಿರುವ ಭಕ್ತವಿಜಯ ಗ್ರಂಥಗಳಿಂದ ವಿದಿತವಾಗುವುದು. ಅಂತಹವುಗಳಲ್ಲಿ ಆ ಮಹಾತ್ಮನ ಭಕ್ತಿ ಜ್ಞಾನ ವೈರಾಗ್ಯಗಳನ್ನು ಸೂಚಿಸುವ ಮುಖ್ಯವಾದ ಮೂರು ವಿಷಯಗಳನ್ನು ಮಾತ್ರ ಆರಿಸಿ ತೆಗೆದು ಅವುಗಳಜೊತೆಗೆ ದೃಶ್ಯರೂಪಕಕ್ಕೆ ಅನುಕೂಲವಾದ ಕೆಲವು ನೂತನ ಪಾತ್ರ ಸಂದರ್ಭ ಸಂವಿಧಾನಗಳನ್ನು ಕಲ್ಪಿಸಿಕೊಂಡು ಈ ನಾಟಕವನ್ನು ರಚಿಸಲಾಗಿದೆ. ಇದರಲ್ಲಿ ಕಬೀರದಾಸನ ಪಾತ್ರದಿಂದ, ನಿಜವಾದ ಜ್ಞಾನಿಯ ರೀತಿಯನ್ನು ತಕ್ಕಮಟ್ಟಿಗೆ ನಿದರ್ಶಿಸುವುದು ಮಾತ್ರವಲ್ಲದೆ, ಸರ್ವಮತಗಳ ಕೇಂದ್ರತತ್ವವೂ ಸಾಮಾನ್ಯವಾಗಿ ಒಂದೇ ಆಗಿರುವಕಾರಣ, ಮತಮಾತ್ಸರ್ಯಗಳಿಂದ ಹೊಡೆದಾಡುವುದುಚಿತವಲ್ಲವೆಂತಲೂ, ಧರ್ಮಾಧರ್ಮಗಳ ಪರಸ್ಪರ ಹೋರಾಟದಲ್ಲಿ ಕಡೆಗೆ ಧರ್ಮಪಕ್ಷವೇ ಜಯವನ್ನು ಹೊಂದುವದೆಂತಲೂ ವ್ಯಕ್ತಪಡಿಸುವುದೇ ಈ ಗ್ರಂಥ ರಚನೆಯಲ್ಲಿ ನನ್ನ ಮುಖ್ಯೋದ್ದೇಶವಾಗಿರುವುದು.

ನಾಟಕಲೇಖನದಲ್ಲಿ ನನಗೆ ವಿಶೇಷವಾದ ಉತ್ತೇಜನವನ್ನಿತ್ತ ಗುಬ್ಬಿ ಶ್ರೀ ಚೆನ್ನಬಸವೇಶ್ವರ ನಾಟಕಸಂಘದ ಮಾಲೀಕರಾದ ಮ|| ರಾ|| ವಿನೋದರತ್ನಾಕರ, ನಾಟಕಚಿಂತಾರತ್ನ, ರಸಿಕಶಿಖಾಮಣಿ ಜಿ ಎಚ್. ವೀರಣ್ಣನವರ ಪ್ರೋತ್ಸಾಹದಿಂದ ನಾನು ೧೯೨೧ ನೆಯ ವರ್ಷದಲ್ಲಿ ಅಂದರೆ ಸುಮಾರು ೧೨ ವರ್ಷಗಳ ಹಿಂದೆಯೇ ಈ ನಾಟಕವನ್ನು ರಚಿಸಿ ಅವರ ಸಂಘಕ್ಕೆ ೧೯೨೨ ನೆಯ ವರ್ಷದಲ್ಲಿ ಅಭ್ಯಾಸಮಾಡಿಸಿದೆನು. ನಮ್ಮ ಮೈಸೂರು ದೇಶದಲ್ಲಿ ಮಾತ್ರವಲ್ಲದೆ ಮದ್ರಾಸ್ ಬೊಂಬಾಯಿ ಪ್ರಾಂತ್ಯಗಳ ಕರ್ನಾಟಕ ಸೀಮೆಗಳಲ್ಲಿಯೂ ಸಹ ಈ ನಾಟಕವನ್ನು ಮಹಾಜನರು ಬಹಳವಾಗಿಮೆಚ್ಚಿ ಪ್ರೋತ್ಸಾಹಿಸಿದರು. ಈಚೆಗೆ ಅಂದರೆ ೧೯೩೩ ನೆಯ ವರ್ಷದಲ್ಲಿ ಬೆಂಗಳೂರ

ಕಳಾನಿಧಿ ಮುದ್ರಣಾಲಯದ ಪ್ರೊಪ್ರೈಟರ್ ಮ|| ರಾ|| ಟಿ. ಕೆ. ಕೃಷ್ಣಸ್ವಾಮಿ ಸೆಟ್ಟರವರು ಈ ನಾಟಕವನ್ನು ಪ್ರಥಮತಃ ಮುದ್ರಿಸಿ ನನಗೆ ಸಹಾಯಮಾಡಿದರು. ಆ ಮುದ್ರಣದ ಪ್ರತಿಗಳು ಸ್ವಲ್ಪಕಾಲದಲ್ಲಿಯೇ ಮುಗಿದುಹೋದುದರಿಂದ, ಈ ಪುಸ್ತಕದ ವಿಷಯದಲ್ಲಿ ಜನಗಳ ಆದರಣೆಯು ಹೆಚ್ಚಾಗಿರುವುದೆಂದು ತಿಳಿದು ಮತ್ತೆ ಈಗ ದ್ವಿತೀಯ ಮುದ್ರಣವನ್ನು ಮಾಡಿಸಲಾಯಿತು.

ನಾಟಕಲೇಖನಕಾರ್ಯದಲ್ಲಿ ನನಗೆ ಬಹಳ ಪ್ರೋತ್ಸಾಹವನ್ನಿತ್ತು ಗೌರವಿಸಿದ ಮ|| ರಾ|| ವಿನೋದರತ್ನಾಕರ ಜಿ ಎಚ್. ವೀರಣ್ಣನವರಿಗೂ ಮತ್ತು ಮುದ್ರಣಕಾರ್ಯಗಳಲ್ಲಿ ನನಗೆ ವಿಶೇಷ ಸಹಾಯಮಾಡುತ್ತಿರುವ ಮ|| ರಾ|| ಟಿ. ಕೆ. ಕೃಷ್ಣಸ್ವಾಮಿಸೆಟ್ಟರವರಿಗೂ ಸಹ ನಾನು ನಿರಂತರ ಕೃತಜ್ಞನಾಗಿದ್ದೇನೆ.

ದೋಷಗಳನ್ನೆಣಿಸದೆ ಗುಣಲೇಶದಿಂದ ಸಂತೋಷಪಡುವ ಕರ್ಣಾಟಕ ಭಾಷಾಭಿಮಾನಿಗಳಾದ ರಸಿಕಜನರಿಗೆ, ಈ ನಾಟಕವನ್ನೋದುವುದರಿಂದ ಸ್ವಲ್ಪಮಟ್ಟಿಗೆ ಸಂತೋಷವಾದರೂ ನಾನು ಕೃತಾರ್ಥನಾದೆನೆಂದು ಸಂತೋಷಪಡುವೆನು.

೮—೨—೧೯೩೩.
ಬೆಂಗಳೂರು ನಗರ.

ಇತಿ
ಬೆಳ್ಳಾವೆ ನರಹರಿಶಾಸ್ತ್ರಿ.

# ಪಾತ್ರಗಳು.

| | |
|---|---|
| ಶ್ರೀರಾಮಚಂದ್ರ | |
| ಕಬೀರದಾಸ | ಕಥಾನಾಯಕ |
| ಕಮಾಲದಾಸ | ಕಬೀರದಾಸನ ಪುತ್ರ |
| ರತ್ನಾಕರ | ಶ್ರೀಮಂತನಾದ ವ್ಯಾಪಾರಿ |
| ಕಾಕೋದರ | ರತ್ನಾಕರನ ದುರ್ಮಾರ್ಗಿ ಸ್ನೇಹಿತ |
| ಲಿಂಗ | ರತ್ನಾಕರನ ಸೇವಕ |
| ವೃದ್ಧಬ್ರಾಹ್ಮಣ | ಶ್ರೀರಾಮಚಂದ್ರನ ಬೇರೆರೂಪ |
| ಗ್ರಾಮಾಧಿಕಾರಿ | |
| ವೆಂಕಟಯ್ಯಸೆಟ್ಟಿ | ವರ್ತಕ |
| ನೀಲಗಿರಿಸೆಟ್ಟಿ | ವರ್ತಕ |
| ಗ್ರಾಮರಕ್ಷಕ | ಶ್ರೀರಾಮಚಂದ್ರನ ಬೇರೆರೂಪ |

ಸ್ತ್ರೀಯರು :—

| | |
|---|---|
| ಸುಂದರಬಿ | ಕಬೀರದಾಸನ ಪತ್ನಿ |
| ಮಧುಮೋಹಿನಿ | ರತ್ನಾಕರನ ಆಶ್ರಯದಲ್ಲಿದ್ದ ಕುಲಟೆ |
| ಗಂಗಾದೇವಿ | |

**ಸಾಧುಗಳು, ದಾಸಜನರು, ಗ್ರಾಮರಕ್ಷಕರು,**
**ಪಂಚಾಯಿತರು, ಮೊದಲಾದವರು.**

---

ಸೂಚನೆ.—ಈ ಪುಸ್ತಕದಲ್ಲಿ ಪಾತ್ರಗಳ ಭಾಷಣ ಅಥವಾ ಪದ್ಯಗಳಬಳಿಯಲ್ಲಿ ಅಲ್ಲಲ್ಲ ಹಾಕಿರುವ ಸಂಖ್ಯೆಗಳು, ಕಡೆಯಲ್ಲಿ ಕೊಟ್ಟಿರುವ ಅನುಬಂಧದ ಆಯಾ ಸಂಖ್ಯೆಯ ಹಾಡುಗಳನ್ನು ಉಪಯೋಗಿಸಿಕೊಳ್ಳಬೇಕಾದ ಸ್ಥಳಗಳನ್ನು ಸೂಚಿಸುವುವು

ಶ್ರೀಃ

## ಮಹಾತ್ಮ

# ಕಬೀರದಾಸ

## ನಾಟಕಂ

---

### ನಾಂದಿ

ವೃ॥ ಶ್ರೀವಾತಾತ್ಮಜಚಿತ್ತಕೈರವಶರದ್ರಾಕಾಶಶಾಂಕಂ ಮಹಾ
ದೇವಪ್ರಸ್ತುತ ಭವ್ಯತಾರಕಮಹಾ ಮಂತ್ರಸ್ವರೂಪಂ ಸದಾ ॥
ಸೇವಾಸಕ್ತಜನೈಕಜೀವನಸುಖಾನಂದಂ ದಯಾಮಂದಿರಂ ।
ದೇವಂ ಮಂಗಳಮಾಗೆ ಭಕ್ತಸುಲಭಂ ಶ್ರೀಜಾನಕೀವಲ್ಲಭಂ ॥೧॥

**ಸೂತ್ರಧಾರ**—( ಕುಸುಮಾಂಜಲಿಯಿಂದ ರಂಗವನ್ನರ್ಚಿಸಿ)

ದೈವಭಕ್ತಿಭರಿತರೂ ಸಕಲಕಲಾಮಹಿತರೂ ಆದ ಈ ರಸಿಕಶಿರೋಮಣಿಗಳನ್ನು ನಾಟಕಾಭಿನಯದಿಂದ ಸಂತೋಷಪಡಿಸಲು ಆಜ್ಞಪ್ತನಾದ ನಾನಲ್ಲವೇ ಪುಣ್ಯಶಾಲಿಯು ! ನಾಟಕಾರಂಭಕ್ಕೆ ಸಮಯವು ಸಮೀಪಿಸುತ್ತ ಬಂತು, ನಟಿಯಿನ್ನೂ ಏತಕ್ಕೆ ಬರಲಿಲ್ಲ !
( ಪಕ್ಕಕ್ಕೆ ನೋಡಿ ) ಪ್ರಿಯೇ !

**ನಟಿ**—(ಪ್ರವೇಶಿಸಿ) ಪ್ರಿಯಾ, ಇದೋ ಬಂದೆನು.

**ಸೂತ್ರಧಾರ**—ಇದೇನು ! ನೀನು ಬರಲು ಇಷ್ಟು ವಿಳಂಬವು ?

**ನಟಿ**—ಕಾಂತಾ, ತಮ್ಮ ಆಹ್ವಾನಪತ್ರಿಕೆಯಂತೆ ಶ್ರೀ ರಾಮೋತ್ಸವಕ್ಕೆಂದು ನಮ್ಮ ಮನೆಗೆ ಈಗತಾನೆ ಕೆಲವರು ಸಾಧುಮಹನೀಯರು ದಯಮಾಡಿಸಿದರು, ಅವರನ್ನು ಸತ್ಕರಿಸುತ್ತಿದ್ದೆನು. ಆದುದರಿಂದ ವಿಳಂಬವಾಯಿತು, ಕ್ಷಮಿಸಬೇಕು.

**ಸೂತ್ರಧಾರ**—ಸಂತೋಷ, ಈಗ ಆ ಸಾಧುಗಳು ಎಲ್ಲಿರುವರು ?

**ನಟಿ**—ನಮ್ಮ ಮನೆಯ ಸಂಗೀತಶಾಲೆಯಲ್ಲಿ ಅವರಿಗೆ ಸ್ಥಳವನ್ನು ಏರ್ಪಡಿಸಿ ಪುತ್ರನಾದ ರಘುನಾಥನನ್ನು ಅವರ ಉಪಚಾರಕ್ಕೆ ನಿಯಮಿಸಿ ಬಂದೆನು.

**ಸೂತ್ರಧಾರ**—ಬಹಳ ಒಳ್ಳೆಯ ಕೆಲಸಮಾಡಿದೆ! ಅದಿರಲಿ! ಈ ಸಭ್ಯರಾಜ್ಞೆಯಂತೆ ನಾಟಕವನ್ನು ನಡೆಯಿಸಲು ತಕ್ಕಂತೆ ಸಲಕರಣೆಗಳನ್ನೇರ್ಪಡಿಸಲು ನಿನ್ನೊಡನೆ ಹೇಳಿದ್ದೆನಷ್ಟೆ! ಅದನ್ನು ಗಮನಿಸಿರುವೆಯೋ ?

**ನಟಿ**—ಓಹೋ! ಎಲ್ಲವನ್ನೂ ಸಿದ್ಧಗೊಳಿಸಿರುವೆನು. ಆದರೆ ನನಗೆ ಒಂದು ಸಂಶಯವುಂಟಾಗಿರುವುದಲ್ಲಾ !

**ಸೂತ್ರಧಾರ**—ಏನದು ?

**ನಟಿ**—ಏನೆಂದರೆ, ಈಗ ನಾವು ಶ್ರೀರಾಮಚಂದ್ರನ ಜನ್ಮನವರಾತ್ರಿಯ ಉತ್ಸವವನ್ನು ನಡೆಯಿಸುತ್ತಿರುವೆವು; ಊರಲ್ಲಿ ಎಲ್ಲೆಲ್ಲಿಯೂ ಹರಿಕೀರ್ತನಗಳು ನಡೆಯುತ್ತಿರುವುವು. ಹೀಗಿರುವಲ್ಲಿ ದೈವಭಕ್ತಶಿರೋಮಣಿಗಳೆನಿಸಿದ ಈ ಸಭ್ಯರು ಶ್ರೀರಾಮಕಥಾಶ್ರವಣವನ್ನು ಬಿಟ್ಟು ನಾಟಕಾವಲೋಕನಕುತೂಹಲಿಗಳಾಗಿರುವುದು ಆಶ್ಚರ್ಯವಲ್ಲವೇ ?

**ಸೂತ್ರಧಾರ**—ಪ್ರಿಯೇ! ಇವರು ಸಾಮಾನ್ಯ ದೈವಭಕ್ತರು ಮಾತ್ರವಲ್ಲ; ಕಲಾಕುಶಲರೂ ಲೋಕ ಹಿತೈಷಿಗಳೂ ಆದುದರಿಂದ ಶಾಂತಕರುಣಾದಿರಸಗಳಿಂದ ಕೂಡಿ ಭಕ್ತಿಜ್ಞಾನವೈರಾಗ್ಯಗಳನ್ನು ಬೋಧಿಸುವ ಭಗವದ್ಭಕ್ತನ ಚರಿತ್ರವನ್ನಭಿನಯಿಸುವಂತೆ ನಮಗಾಜ್ಞೆ ಮಾಡಿರುವರು. ಇಂತಹ ನಾಟಕಗಳನ್ನಭಿನಯಿಸುವ ನಾಟಕರಂಗಗಳು ಸಾಮಾನ್ಯ ಜನರಿಗೆ ಧರ್ಮನೀತಿ ಭಕ್ತಿಬೋಧಕಗಳಾಗಿ ಕರ್ತವ್ಯಗಳನ್ನು ತಿಳಿಸುವ ವಿನೋದ ಪಾಠಶಾಲೆಗಳಾಗಿ ಪರಿಣಮಿಸಿ, ಸಕಲರೂ ಪಾಪರಹಿತರೂ ಸುಗುಣಶಾಲಿಗಳೂ ಜ್ಞಾನಿಗಳೂ ಆಗುವಂತೆ ಮಾಡಬೇಕೆಂಬುದೇ ಇವರ ಮುಖ್ಯವಾದ ಉದ್ದೇಶವು. ಆದಕಾರಣ ಸಂಗೀತ ಸಾಹಿತ್ಯಾಭಿನಯಗಳೆಂಬ ಕುಶಲ ವಿದ್ಯೆಗಳಿಗಿವರು ಈ ರೀತಿಯಾಗಿ ಪ್ರೋತ್ಸಾಹವನ್ನು ಕೊಟ್ಟು ಲೋಕೋಪಕಾರ ಮಾಡುತ್ತಿರುವರು; ಇನ್ನು ಇದಕ್ಕಿಂತಲೂ ಬೇರೆ ಪುಣ್ಯಕಾರ್ಯವುಂಟೇ ?

**ನಟ**—ನಿಜ ! ನಿಜ ! ಈ ವಿಷಯವನ್ನು ತಿಳಿದು ನನಗತ್ಯಾನಂದವಾಯಿತು. ಆದರೆ ಇಂತಹ ರಸಿಕರೂ ಭಕ್ತಾಗ್ರಣಿಗಳೂ ಆದ ಈ ಸಭ್ಯರ ಅಭಿರುಚಿಗೆ ತಕ್ಕಂತೆ ಸುಜ್ಞಾನಬೋಧಕಗಳಾದ ನಾಟಕಗಳನ್ನು ರಚಿಸಿರುವ ಚತುರನಾದ ಕವಿವರನಾರು ?

**ಸೂತ್ರಧಾರ**—ಇದೇನು ಹೀಗೆ ಕೇಳುವೆ ?

ಕಂ|| ಸುವಿಮಲಹರಿಪದಭಕ್ತಂ |
ನವನಾಟಕಕಾವ್ಯಲೋಲನುಜ್ವಲಕವಿತಾ ||
ಯುವಶೀಪ್ರಿಯವೆಸೆಢವನಲೆ ! |
ಕವಿನರಹರಿ ರಸಿಕಜನ ವಿನೋದ ವಿಕಾಸಂ ||೨||

ಆದುದರಿಂ ಆ ಕವಿವರನು ರಚಿಸಿರುವ ನಾಟಕಗಳಲ್ಲಿ ಶ್ರೀರಾಮಭಕ್ತ ಶಿರೋಮಣಿಯಾದ ಮಹಾತ್ಮ ಕಬೀರದಾಸನ ಚರಿತ್ರೆಯನ್ನು ಅಭಿನಯಿಸಬೇಕೆಂದು ಈ ಸಭ್ಯರಪೇಕ್ಷಿಸಿರುವರು ಅಲ್ಲದೆ ತನ್ನ ಚರಿತ್ರೆಯನ್ನಭಿನಯಿಸುವುದಕ್ಕಿಂತಲೂ ತನ್ನ ಭಕ್ತರ ಚರಿತ್ರೆಯನ್ನಭಿನಯಿಸಿದರೂ, ನೋಡಿದರೂ, ಕೇಳಿದರೂ, ಭಕ್ತವತ್ಸಲನಾದ ಪರಮಾತ್ಮನಿಗೆ ಹೆಚ್ಚು ಸಂತೋಷ ವುಂಟಾಗುವುದೆಂದು ಜ್ಞಾನಿಗಳು ಹೇಳುವರು ಅವರಲ್ಲಿಯೂ ಸರ್ವತ್ರ ಸಮದೃಷ್ಟಿಯಿಂದ ಪ್ರಪಂಚವೆಲ್ಲವೂ, ದೈವತೇಜೋಮಯವೆಂದರಿತು, ಹಿಂದೂಮಹಮ್ಮದೀಯರಿಗೆ ಐಕಮತ್ಯವನ್ನುಂಟುಮಾಡಿ ದೇಶೋದ್ಧಾರವನ್ನು ಮಾಡಲು ಯತ್ನಿಸಿ ಶ್ರೀರಾಮಚಂದ್ರನನ್ನು ಪರಮಭಕ್ತಿಯಿಂದಾರಾಧಿಸುತ್ತ ನಿಸ್ಪೃಹನಾಗಿ ಲೋಕಕ್ಕೆ ದಿವ್ಯೋಪದೇಶವನ್ನು ಮಾಡಿದ ಮಹಾತ್ಮನಾದ ಆ ಕಬೀರದಾಸನ ಚರಿತ್ರೆಯೂ, ಮಹಾ ಪತಿವ್ರತೆಯಾದ ಆತನ ಪತ್ನಿಯ ಕಥೆಯೂ ಸಹ ಲೋಕದಲ್ಲಿ ಸರ್ವರಿಂದಲೂ ಅಭಿನಂದ್ಯವಾಗಿ, ನೀತಿಧರ್ಮಗಳನ್ನೂ ಸಾಧುಮಹಿಮೆಯನ್ನೂ ಸಹ ಬೋಧಿಸಿ ಇಹಪರಾನಂದಗಳನ್ನು ಕೊಡುವುದು. ಆದಕಾರಣ ಈ ಸಭ್ಯರು ಇಂತಹ ನಾಟಕವನ್ನು ನೋಡಲಪೇಕ್ಷಿಸಿರುವುದು ನ್ಯಾಯವಲ್ಲವೇ ?

**ನಟ**—ನಿಜ ! ನಿಜ ! ಉತ್ತಮವಾದ ನಾಟಕವನ್ನೇ ಅಪೇಕ್ಷಿಸಿರುವರು ; ಬಹಳ ಸಂತೋಷ.

**ಸೂತ್ರಧಾರ**—ಹಾಗಾದರೆ ಇನ್ನು ಈ ಮನೋಹರವಾದ ವಸಂತವಿಕಾಸ ವನ್ನು ಕುರಿತು ಗಾನಮಾಡು ಅನಂತರ ನಾಟಕವನ್ನಾರಂಭಿಸುವ.

**ನಟಿ**—ಅಪ್ಪಣೆ !

ಶ್ರೀ ಕಂ|| ಹರಿಕೀರ್ತನ ನವನರ್ತನ |
ವರಗಾಯನ ವಿಭವದಿಂದೆ ಹರ್ಷಾಂಬುಧಿಯೊಳ್ ||
ನೆರೆ ನಲಿಯುತ್ತಿರೆ ಜನಮಿಾ |
ಧರೆಗತಿರಮಣೀಯಮಲ್ತೆ ! ಮಾಧವಸಮಯಂ ||೩||

**ಸೂತ್ರಧಾರ**—ಪ್ರಿಯೇ ! ಸಮಯೋಚಿತಭಾವಗಳಿಂದ ನೀನು ಮಾಡಿದ ಈ ವಸಂತವರ್ಣನೆಗೆ ಈ ,ಸಭ್ಯರು ಆನಂದದಿಂದ ತಲೆದೂಗುತ್ತಿರುವರು. (ಪಕ್ಕಕ್ಕೆ ನೋಡಿ) ಓಹೋ ! ಇತ್ತನೋಡು;

ಕಂ|| ಭಕ್ತಾನುಗ್ರಹಮೆಸಪಾ |
ಸಕ್ತಿಯೊಳೆ ಕಬೀರಸದನಕೈತರುತಿರ್ಪಂ ||
ಶಕ್ತಿತ್ರಯರೂಪಂ ವರ |
ಮುಕ್ತಿಪ್ರದ ರಾಮಚಂದ್ರನುರುಗುಣಸಾಂದ್ರಂ ||೪||

ಅದೋ ! ನಮ್ಮ ಕಮಲಶೇಖರನು ಶ್ರೀರಾಮಚಂದ್ರನ ವೇಷವನ್ನು ಧರಿಸಿ ರಂಗಪ್ರವೇಶ ಮಾಡುತ್ತಿರುವನು. ಇನ್ನು ನಾವು ಮುಂದಿನ ಕಾರ್ಯಗಳನ್ನು ಗಮನಿಸುವ, ನಡೆ.

**ನಟಿ**—ಅಪ್ಪಣೆ (ಹೋಗುವರು.)

ಇದು ಪ್ರಸ್ತಾವನೆ.



# ಪ್ರಥಮಾಂಕಂ

## ದೃಶ್ಯ ೧ ಆಕಾಶಮಾರ್ಗವಲ್ಲಿ ಶ್ರೀರಾಮಚಂದ್ರನ ಪ್ರವೇಶ.

**ಶ್ರೀರಾಮ—ಇ.**

ಶಾ॥ ಛಾಯಾಮಾತ್ರವಿಲಾಸ ಮೀಜಗದ ಸಂಸಾರಂ ದಲೀ ತತ್ತ್ವಮಂ ।
ಶ್ರೀಯಃಕಾಮಿಗಳಾಂತು ಮತ್ಪದವನೊಲ್ದಾರಾಧಿಸುತ್ತಿರ್ಪನಂ ॥
ಮಾಯಾಪಾಶಕೆ ಸಿಲ್ಕದಂತೆಸಗಿ ನಿತ್ಯಾನಂದಲೀಲಾಘವ ।
ಶ್ರೀಯಂ ನೀಡಲವರ್ಗೆ ಭಕ್ತಿಗುಣದಿಂ ನಾಂ ಬದ್ಧನಾಗಿರ್ಪೆಂ ॥೫॥

ಲೋಕಾನುಗ್ರಹಾರ್ಥವಾಗಿ ಯುಗಧರ್ಮವನ್ನನುಸರಿಸಿ ನಾನಾವತಾರಗಳನ್ನೆತ್ತಿ ದುಷ್ಟನಿಗ್ರಹ ಶಿಷ್ಟಪರಿಪಾಲನವನ್ನು ಮಾಡಿ ಧರ್ಮವನ್ನುದ್ಧರಿಸುವ ಅಭಿಮತದಿಂದ ನಾನು ತ್ರೇತಾಯುಗದಲ್ಲಿ ಈ ಶ್ರೀರಾಮಾವತಾರವನ್ನೂ ದ್ವಾಪರದಲ್ಲಿ ಶ್ರೀಕೃಷ್ಣಾವತಾರವನ್ನೂ ಮಾಡಿ ಈ ಕಲಿಯುಗದಲ್ಲ ಬೌದ್ಧಾವತಾರದಿಂದಿರುವೆನು. ನಾನು ಇಂತಹ ಸರ್ವಶಕ್ತನಾದರೂ ನನ್ನ ಭಕ್ತರು ತಮ್ಮ ಭಕ್ತಿಯಿಂದ ನನ್ನನ್ನು ತಮ್ಮ ವಶಮಾಡಿಕೊಂಡು ನನಗಿಂತಲೂ ಶಕ್ತರಾಗಿ, ಲೋಕನಾಟಕಸೂತ್ರವನ್ನು ಹಿಡಿದಿರುವ ನನ್ನನ್ನೇ ಆಡಿಸಲು ತಕ್ಕ ಸೂತ್ರವನ್ನವರು ಹಿಡಿದಿರುವರು. ಇದರಿಂದ ಭಕ್ತರ ಇಷ್ಟದಂತೆ ನಡೆಯಲು ನಾನು ಬದ್ಧನಾಗಿರುವೆನು. ಆದುದರಿಂದಲೇ ನನ್ನನ್ನು ಭಕ್ತಪರಾಧೀನನೆಂದು ಹೇಳುವರು ಈ ಬಿರುದನ್ನುಳಿಸಿಕೊಳ್ಳಲು ನಾನು, ಯಾವ ಕಾಲದಲ್ಲಿ ಯಾವ ಭಕ್ತನು ಯಾವ ರೂಪದಲ್ಲ ನನ್ನನ್ನು ಉಪಾಸಿಸಿದರೆ ಆ ಕಾಲದಲ್ಲಿ ಅದೇ ಸ್ಥಳದಲ್ಲಿ ಅದೇ ರೂಪದಿಂದ ಆತನಿಗೆ ಗೋಚರನಾಗಿ, ಇಷ್ಟಾರ್ಥಗಳನ್ನು ಕೊಟ್ಟು ಉದ್ಧರಿಸುತ್ತಿರುವೆನು. ಈಗ ಕಬೀರನೆಂಬ ಭಕ್ತನು ನನ್ನನ್ನು ಶ್ರೀರಾಮಮೂರ್ತಿಯೆಂದುಪಾಸಿಸುತ್ತಿರುವನು, ಇದರಿಂದ ನಾನು ಈ ಕಲಿಯುಗದ ಬೌದ್ಧಾವತಾರದಿಂದಿದ್ದರೂ ಭಕ್ತಾಗ್ರಣಿಯಾದ ಕಬೀರನಿಗೆ ಶ್ರೀರಾಮನಾಗಿ ಗೋಚರನಾಗಬೇಕಾಗಿರುವುದು. ಆತನಾದರೋ ಸ್ಥಿರಚಿತ್ತನು, ಅಹಂಕಾರ ಮಮಕಾರ ರಹಿತನು, ಪರಮಶಾಂತನು, ಸಾಧುವು. ಅದಕಾರಣ ಆತನನ್ನು,

ಮಾತ್ರ ಮಗ್ಗದ ಮೇಲೆ ಕುಳಿತು ಕೆಲಸಮಾಡಿ, ಉಳಿದಕಾಲವೆಲ್ಲವನ್ನೂ ಶ್ರೀರಾಮಭಜನೆಯಲ್ಲಿಯೇ ಕಳೆಯುತ್ತಿರುವನು. ಇದರಿಂದ ಒಂದೊಂದು ವಸ್ತ್ರವು ನೆಯ್ದು ಪೂರ್ತಿಯಾಗಲು ಬಹಳ ದಿನಗಳಾಗುವುವು ಇದರಿಂದ ಮನೆಯಲ್ಲಿ ಆಹಾರಕ್ಕೆ ಮಾರ್ಗವಿಲ್ಲದೆ ಆಗಾಗ ವಾರಕ್ಕೆ ಎರಡು ಮೂರು ಉಪವಾಸಗಳನ್ನು ಸಹ ಮಾಡಬೇಕಾಗಿರುವುದು; ಇದುವರೆಗೆ ಎರಡು ಉಪ ವಾಸಗಳನ್ನು ಮಾಡಿದುದಾಯಿತು. ನಾಳಿನದಿನ ಸಂತೆಯಾದುದರಿಂದ ವಿಕ್ರ ಯಿಸಲು ವಸ್ತ್ರವು ಸಿದ್ಧವಾಗಿದ್ದಿದ್ದರೆ ನಾಲ್ಕೈದು ದಿನಗಳ ಜೀವನಕ್ಕಾ ದರೂ ಹಣವು ಸಿಕ್ಕುತ್ತಿತ್ತು. ಈಗ ಮಗ್ಗದ ಮೇಲಿರುವ ವಸ್ತ್ರವು ಪೂರ್ತಿ ಯಾಗಲು ಇನ್ನೂ ಬಹಳಮಟ್ಟಿಗೆ ನೇಯಬೇಕಾಗಿರುವುದು ಕಾಂತನಾ ದರೋ ರಾಮಭಜನೆಯಲ್ಲಿಯೇ ಲೋಲನಾಗಿರುವನು, ನನಗೆ ನೇಯ್ಗೆಯ ಕೆಲಸದ ಗಂಧವೇ ತಿಳಿಯದು ; ಏನು ಮಾಡುವುದು !

( ಚಿಂತಿಸುತ್ತ ನಿಷ್ಕ್ರಮಿಸಳು )

**ಕಬೀರ** — (ಪ್ರವೇಶಿಸಿ) ೫.

ಕಂ|| ವಿಶ್ವಾತ್ಮಕನೆನಿಸಿದ ಪರ |
ಮೇಶ್ವರವರರಾಮಚಂದ್ರನಂ ಕೀರ್ತಿಸುತುಂ ||
ಶಾಶ್ವತಸುಖಮುಂ ತಳೆಯದೆ |
ನಶ್ವರಭವಸುಖವ ಬಯಸುವುದೇನಜ್ಞತೆಯೊ ||೭||

ಶ್ರೀರಾಮಚಂದ್ರಾ ! ಲೋಕನಾಟಕ ಸೂತ್ರಧಾರಿಯಾದ ನಿನ್ನ ಚರ್ಯೆ ಗಳು ಅತಿ ವಿಚಿತ್ರವಾದವುಗಳು ! ಮಹಿಮೆಯು ಅದ್ಭುತವಾದುದು ! ಆಹಾ! ಈ ಪ್ರಪಂಚದಲ್ಲಿ ನಿನ್ನನ್ನು ಪರಮಭಕ್ತಿಯಿಂದಾರಾಧಿಸತಕ್ಕ ಭಕ್ತರಿಗೆ ಮೇಲೆ ಮೇಲೆ ದಪ್ಪದಾರಿದ್ರ್ಯಗಳೇ ಒದಗುತ್ತಿರುವುವು. (ಚಿಂತಿಸಿ) ಆದರೆ ಅನನ್ಯಭಕ್ತಿಭಾವದಿಂದ ಮಾಡುವ ನಿನ್ನ ಧ್ಯಾನದಿಂದಲೂ, ನಿನ್ನ ಕಥಾಶ್ರವ ಣಾಲಾಪಗಳಿಂದಲೂ, ನಿನ್ನ ದಿವ್ಯನಾಮಾಮೃತಪಾನದಿಂದಲೂ ಉಂಟಾ ಗುವ ಆನಂದಕ್ಕೆ ಇಹಲೋಕದ ಯಾವ ಐಶ್ವರ್ಯವು ತಾನೆ ಸಾಟಿಯಾ ದೀತು ! ಅಶಾಶ್ವತವಾದ ಇಹಲೋಕಸುಖವೇ ಸ್ಥಿರಸುಖವೆಂದೆಣಿಸಿ ಕಾಮಾದಿ ಷಡ್ವರ್ಗಗಳಿಗೆ ವಶರಾಗಿ ತಮ್ಮ ಸುಖಕ್ಕಾಗಿ ಪರರನ್ನು ದುಃಖಕೆ

ಸಿಕ್ಕಿ ಸ್ವಾರ್ಥಪರತೆಯೆಂಬ ಧರ್ಮವನ್ನವಲಂಬಿಸಿ ಅರ್ಥಾರ್ಜನೆಯೇ ನಿತ್ಯ ಕರ್ಮವೆಂದು ಕೈಕೊಂಡು ನಿನ್ನಪಾದಧ್ಯಾನವನ್ನೇ ಮರೆತು ದುರಹಂಕಾರ ದಿಂದ ಬೀಗುತ್ತಿರುವವರಿಗೆ ಆ ನಿನ್ನನಾಮಾಮೃತದ ರುಚಿಯೂ ಮಹಿಮೆಯೂ ಹೇಗೆತಾನೆ ತಿಳಿದೀತು ! ಅಸ್ಥಿರವಾದ ಅಂತಹ ಐಶ್ವರ್ಯದಿಂದ ಫಲವೇನು ! ನಮ್ಮ ಸಕಲಕಾರ್ಯಗಳಿಗೂ ಆಧಾರವಾದ ಈ ದೇಹವೇ ಕಡೆಗೆ ನಮ್ಮ ಹಿಂದೆ ಬರುವುದಿಲ್ಲ ಹೀಗಿರುವಲ್ಲಿ ಈ ಐಶ್ವರ್ಯವೂ ವೈಭವವೂ ನಮ್ಮ ಹಿಂದೆ ಬರುವುವೇ ? ಎಂದಿಗೂ ಇಲ್ಲ ! ನಮ್ಮ ಪುಣ್ಯಕರ್ಮಗಳೂ ನಿನ್ನಪಾದಕಮ ಲದ ಭಕ್ತಿಯೂ ಮಾತ್ರವೇ ನಮ್ಮ ಹಿಂದೆ ಬಂದು ನಮಗೆ ನಿತ್ಯಾನಂದಕರ ವಾದ ಮೋಕ್ಷಪದವಿಯನ್ನು ಕೊಡುವುವು ಆದಕಾರಣ ನಾನು ದರಿದ್ರನಾದರೂ ಚಿಂತೆಯಿಲ್ಲ. ನಿತ್ಯಸುಖಾನಂದಮಯವಾದ ನಿನ್ನ ಲೋಕವನ್ನು ಸೇರಿ ಸಾಯುಜ್ಯವನ್ನು ಪಡೆಯಲು ಸಾಧಕವಾದ ನಿನ್ನಪಾದಭಕ್ತಿಯೊಂದುಮಾತ್ರ ನನ್ನಲ್ಲಿ ಸ್ಥಿರವಾಗಿ ನಿಲ್ಲುವಂತೆ ನೀನು ಅನುಗ್ರಹಿಸಿದರೆ ಸಾಕು (ಮುಂದೆ ಬಂದು ಬೀಬಿಯನ್ನು ನೋಡಿ) ಪ್ರಿಯೇ ! ಏನಿದು ಚಿಂತಿಸುತ್ತಿರುವಂತೆ ಕಾಣುವೆ ?

ಬೀಬಿ—ಪ್ರಿಯಾ, ನನ್ನ ಚಿಂತೆಗೆ ಪಾರವೆಲ್ಲಿಯದು ?

ಕಬೀರ—ಏನು ? ಶ್ರೀರಾಮಚಂದ್ರನ ಭಕ್ತರಿಗೂ ಚಿಂತೆಯುಂಟೇ ?

ಬೀಬಿ—ಶ್ರೀರಾಮಚಂದ್ರನ ಭಕ್ತರಾದ ಮಾತ್ರಕ್ಕೇ ತಿನ್ನುವುದಕ್ಕೆ ಕೂಳಿಗೆ ಮಾರ್ಗವಿಲ್ಲದಿದ್ದರೆ ಚಿಂತೆಯಲ್ಲವೇ ?

ಕಬೀರ—ಶ್ರೀರಾಮನಾಮಾಮೃತವನ್ನು ಪಾನಮಾಡುತ್ತಿರುವ ನನಗೆ ಹಸಿವೇ ಇಲ್ಲವಾಗಿರುವುದು.

ಬೀಬಿ—ನ್ಯಾಯವು. ಇಂತಹ ಪರಮರಾಮಭಕ್ತಶಿರೋಮಣಿಯಾದ ತಮ್ಮ ಪಾದಸೇವೆಯನ್ನು ಮಾಡಿಕೊಂಡಿರುವ ನನಗೂ ಹಾಗೆಯೇ ಸರಿ; ಆದರೆ ಭಕ್ತಿಯಿಂದ ಶ್ರೀರಾಮಸೇವೆಯನ್ನು ಮಾಡಲು ಶರೀರವು ಆವ ಶ್ಯಕವಲ್ಲವೇ ? ಅದನ್ನು ಕಾಪಾಡಿಕೊಳ್ಳುವುದು ನಮ್ಮ ಕರ್ತವ್ಯವ ಲ್ಲವೇ ? ಹೀಗಿರುವಲ್ಲಿ ಒಪ್ಪತ್ತಿನ ಕೂಳಿಗೂ ಮಾರ್ಗವಿಲ್ಲದಿರುವ ನಾವು ಸಂತೋಷವಾಗಿ ರಾಮಸೇವೆ ಮಾಡಲು ಈ ದಾರಿದ್ರ್ಯವು ಪ್ರತಿಬಂಧಕ ವಾಗಿರುವುದಲ್ಲಾ ! ನಾವು ಈಗ ಎರಡು ಉಪವಾಸಗಳನ್ನು ಮಾಡಿ

ದುದಾಯಿತು. ಈ ಮಗ್ಗದಮೇಲಿರುವ ವಸ್ತ್ರವನ್ನು ಪೂರಯಿಸಿ ನೇಯ್ದಿದ್ದಲ್ಲಿ ನಾಳಿನದಿನ ಸಂತೆಯಲ್ಲಿ ವಿಕ್ರಯಿಸಿ ಆಹಾರ ಪದಾರ್ಥಗಳನ್ನು ತಂದು ಸ್ವಲ್ಪವಾದರೂ ಜೀವನಾಧಾರ ಮಾಡಿಕೊಳ್ಳಬಹುದಾಗಿತ್ತು, ಈಗ ಅದಕ್ಕೂ ಮಾರ್ಗವಿಲ್ಲವಲ್ಲಾ ಎಂದು ಚಿಂತಿಸುತ್ತಿರುವೆನು

ಕಬೀರ— ಪ್ರಿಯೇ! ನೀನು ಹೇಳುವುದೆಲ್ಲವೂ ನಿಜ. ಆದರೆ ಶ್ರೀರಾಮಚಂದ್ರನ ಧ್ಯಾನದಲ್ಲಿದ್ದ ನನಗೆ ಈ ಗೃಹಕೃತ್ಯವಿಚಾರಗಳು ಮನಸ್ಸಿಗೇ ಹತ್ತಲಿಲ್ಲ ಏನು ಮಾಡುವುದು! ಈ ರಾತ್ರಿಯಲ್ಲಿ ಇನ್ನು ಆಹಾರವನ್ನೊದಗಿಸಲು ಸಾಧ್ಯವಿಲ್ಲ, ಆದಕಾರಣ ಗಂಗಾಸೇವನೆಯಿಂದಲೇ ತೃಪ್ತರಾಗಿ ನಿದ್ರಿಸೋಣ ನಾನು ಬೆಳಗಿನ ಜಾವಕ್ಕೆ ಎದ್ದು ಮಗ್ಗದಮೇಲಿರುವ ವಸ್ತ್ರವನ್ನು ಪೂರ್ತಿಯಾಗಿ ನೇಯ್ದು ವಿಕ್ರಯಿಸಿ ಆಹಾರಕ್ಕೆ ತಕ್ಕ ಅನುಕೂಲವನ್ನು ಮಾಡುವೆನು.

ಬೀಬಿ— ಹಾಗೆಯೇ ಆಗಲಿ (ಹೋಗುವರು.)

(ಶ್ರೀರಾಮಚಂದ್ರನ ಪ್ರವೇಶ.)

ಶ್ರೀರಾಮ— ಈ ಕಬೀರನ ಭಕ್ತಿಯು ಅಪರಿಮಿತವಾದುದು. ಆಹಾರ ನಿದ್ರಾದಿಗಳನ್ನು ಸಹ ಗಮನಿಸದೆ ನನ್ನ ಧ್ಯಾನದಲ್ಲಿಯೇ ಲೋಲನಾಗಿರುವನು ನನ್ನ ದರ್ಶನವನ್ನಪೇಕ್ಷಿಸಿ ಸದಾ ನನ್ನನ್ನು ಉಪಾಸಿಸುತ್ತಿರುವ ಈತನಲ್ಲಿ.

ಶ್ಲೋ|| ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ |
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ||

ಎಂದು ಸಂಕಲ್ಪಿಸಿರುವ ನಾನು ನನ್ನ ಕೃಪೆಯನ್ನು ತೋರಿಸುವುದೇ ಧರ್ಮವು ಆದುದರಿಂದ ಈತನು ನನ್ನ ಸೇವೆಯನ್ನು ಮಾಡುತ್ತಿರುವಲ್ಲಿ ಈತನ ಸೇವೆಯನ್ನು ನಾನು ಮಾಡಲೇಬೇಕು. ಆದಕಾರಣ ಈ ಮಗ್ಗದಮೇಲೆ ಅರ್ಧಭಾಗ ನೆಯ್ದಿಟ್ಟಿರುವ ವಸ್ತ್ರವನ್ನು, ಆತನು ಎದ್ದು ಬರುವಷ್ಟರಲ್ಲಿ ಪೂರ್ತಿಯಾಗಿ ನೇಯ್ದಿಟ್ಟಿರುವೆನು.

೬ (ಮಗ್ಗದಮೇಲೆ ಕುಳಿತು ನೇಯುತ್ತಿರುವನು.)

**ಕಬೀರ**— (ಪ್ರವೇಶಿಸಿ ನೇಯುವ ಶಬ್ದವನ್ನು ಕೇಳಿ) ಏನಿದು ಶಬ್ದವು ! ಬೆಳಗಿನ ಜಾವಕ್ಕೆ ಎದ್ದು ವಸ್ತ್ರವನ್ನು ನೇಯಬೇಂಕೆಂದಾಲೋಚಿಸಿ ಮಲಗಿಕೊಂಡೆನು ಮನಸ್ಸಿನ ಭಾವವು ಕನಸಿನಲ್ಲಿ ಕಾಣುವುದೆಂಬಂತೆ ಈಗ ನಾನೇ ಮಗ್ಗದ ಮೇಲೆ ಕುಳಿತು ನೇಯುತ್ತಿದ್ದಂತೆ ಸ್ವಪ್ನವಾಯಿತು ಎಚ್ಚರವಾದ ಕೂಡಲೆ ನೇಯುವ ಶಬ್ದವು ಕೇಳಬಂತು ; ಅದೋ ! ಇನ್ನೂ ಅದೇ ಶಬ್ದವು ಕೇಳಬರುತ್ತಿರುವುದು ! ಇಲ್ಲಿ ನೇಯುತ್ತಿರುವರು ಯಾರು ! ನನ್ನ ಪತ್ನಿಗೆ ನೇಯುವ ಕೆಲಸವು ತಿಳಿಯದು, ಪುತ್ರನಾದ ಕಮಾಲ್‌ದಾಸನಾದರೋ ಗೋಕುಲ ಬೃಂದಾವನ ಪ್ರಾಂತ್ಯಗಳಿಗೆ ತೀರ್ಥಯಾತ್ರೆ ಹೋಗಿರುವನು ನೇಯಬಲ್ಲ ನಾನು ನಿದ್ರಿಸುತ್ತಿದ್ದು ಈಗತಾನೆ ಎದ್ದು ಬಂದಿರುವೆನು. ಇನ್ನು ಈ ಶಬ್ದವು ಏತರಿಂದುಂಟಾಗಿರಬಹುದು ! (ಆಲೋಚಿಸಿ) ಯಾರೋ ನೇಯುತ್ತಲೇ ಇರಬೇಕು. ಇರಲಿ, ಮುಂದೆಹೋಗಿ ನೋಡುವೆನು

(ಸಮೀಪಕ್ಕೆ ಬಂದು, ನೇಯುತ್ತಿದ್ದ ಶ್ರೀರಾಮಚಂದ್ರಮೂರ್ತಿಯನ್ನು ನೋಡಿ) ಆಹಾ ! ಪರಮಾತ್ಮನಾದ ಶ್ರೀರಾಮಚಂದ್ರನೇ, ನಾನು ಮನಸ್ಸಿನಲ್ಲಿ ಉಪಾಸಿಸುತ್ತಿದ್ದ ಕೃಪಾಕರಮೂರ್ತಿಯೇ ! ಇಂದಿಗೆ ನನ್ನನ್ನನುಗ್ರಹಿಸಿ ನಿನ್ನ ದರ್ಶನವನ್ನಿತ್ತೆಯಾ ! ಪರಮಾತ್ಮಾ ! ನಿನಗಭಿನಮಿಸುವೆನು.

( ಸಾಷ್ಟಾಂಗ ನಮಸ್ಕಾರವನ್ನು ಮಾಡುವನು )

**ಶ್ರೀರಾಮ**—(ಮಾಯವಾಗುವನು )

**ಕಬೀರ**—(ಎದ್ದು ನೋಡಿ ರಾಮಚಂದ್ರನನ್ನು ಕಾಣದೆ ವ್ಯಸನಕುತೂಹಲಗಳಿಂದ) ಶ್ರೀರಾಮಾ ! ರಘುರಾಮಾ ! ಎಲ್ಲಿರುವೆ ! ಪರಮಾತ್ಮಾ ! ಒಂದು ಕ್ಷಣಮಾತ್ರದಲ್ಲಿ ಮಿಂಚಿನಂತೆ ಕಂಡು ಮಾಯವಾದೆಯಲ್ಲಾ !

೭ ಸಕಲಲೋಕ ಸೃಷ್ಟಿಸ್ಥಿತಿಲಯಗಳಿಗೂ ಕಾರಣನಾಗಿ, ಸರ್ವಜ್ಞನೂ, ಸರ್ವಶಕ್ತನೂ, ಸರ್ವಾಂತರ್ಯಾಮಿಯೂ ಆದ ನೀನು ಈ ಪ್ರಪಂಚದಲ್ಲಿ ಅಗೋಚರನಾಗಿದ್ದು, ಭಕ್ತನೆಂಬ ಕರುಣದಿಂದ ನನಗೆ ಮಾತ್ರ ನಿನ್ನ ದಿವ್ಯ ದರ್ಶನವನ್ನಿತ್ತೆಯಲ್ಲವೇ ! ನಾನಲ್ಲವೇ ಧನ್ಯನು ! ಪರಮಾತ್ಮಾ ! ಕಣ್ಣಾರೆ ನಿನ್ನನ್ನು ನೋಡಿ ಆನಂದಪಡುವಷ್ಟರಲ್ಲಿ

ಮಾಯವಾಗಿರುವೆಯಲ್ಲಾ ! ಶ್ರೀರಾಮಾ ! ಮತ್ತೊಂದಾವೃತ್ತಿ ನಿನ್ನ ದರ್ಶನವನ್ನು ಕರುಣಿಸಬಾರದೇ ! ಆಹಾ ! ಕಣ್ಣಿಗೆ ಕಂಡ ಜೀವರತ್ನವು ಕೈಗೆ ಸಿಕ್ಕದೆ ಹೋಯಿತಲ್ಲಾ! (ಚಿಂತಿಸಿ) ಪ್ರಿಯೇ ! ಪ್ರಿಯೇ !

**ಸುಂದರಬಿ**—(ಪ್ರವೇಶಿಸಿ) ಪ್ರಿಯಾ ! ಏನಿದು ! ಅರ್ಧರಾತ್ರಿಯಲ್ಲಿ ಎದ್ದು ಬಂದು ನನ್ನನ್ನು ಕೂಗಲು ಕಾರಣವೇನು ?

**ಕಬೀರ**—ಪ್ರಿಯೇ ! ಆಶ್ಚರ್ಯವನ್ನೇನೆಂದು ಹೇಳಲಿ! ನಾವು ನಿದ್ರಿಸುತ್ತಿದ್ದಾಗ ನನಗೆ ನೇಯುವ ಶಬ್ದವು ಕೇಳಿಬಂದಿತು ಬಂದು ನೋಡುವಲ್ಲಿ ಶ್ರೀರಾಮಚಂದ್ರನೇ ಮಗ್ಗದಮೇಲೆ ಕುಳಿತು ನೇಯುತ್ತಿದ್ದನು. ನಾನು ನಮಸ್ಕರಿಸಿ ಏಳುವಷ್ಟರಲ್ಲಿ ಅಂತರ್ಧಾನನಾದನು ! ನಿನಗೆ ಆ ದೈವಸಂದರ್ಶನವು ಲಭಿಸಲಿಲ್ಲವಲ್ಲಾ ! ನೀನೆಂತಹ ಭಾಗ್ಯಹೀನಳು!

**ಬೀಬಿ**—ಪ್ರಿಯಾ, ತಾವು ಹಾಗೆ ಹೇಳಕೂಡದು, ತಮಗಾದ ಶ್ರೀರಾಮಚಂದ್ರಮೂರ್ತಿಯ ಸಂದರ್ಶನದಿಂದ ನನಗತ್ಯಾನಂದವಾಯಿತು. ಆ ರಾಮಚಂದ್ರನ ಭಕ್ತಾಗ್ರಣಿಯಾದ ತಮ್ಮನ್ನು ನೋಡಿದರೆ ನನಗೆ ಸಕಲದೇವತಾಸಂದರ್ಶನವೂ ಆದಂತೆ ಮಾತ್ರವಲ್ಲದೆ ತಮ್ಮ ಸೇವೆಯಿಂದ ನನ್ನ ಸಕಲಪಾಪಗಳೂ ಪರಿಹಾರವಾಗಿ ನಿತ್ಯಸೌಭಾಗ್ಯವನ್ನು ಪಡೆಯುವೆನು

**ಕಬೀರ**—ಪತಿವ್ರತೆಯಾದ ನಿನ್ನ ಭಾವನೆಯು ಶ್ಲಾಘ್ಯವಾದುದು (ಮಗ್ಗದ ಮೇಲಿನ ವಸ್ತ್ರವನ್ನು ನೋಡಿ) ಇತ್ತನೋಡು ! ವಸ್ತ್ರವು ಪೂರ್ತಿಯಾಗಿ ನೇಯಲ್ಪಟ್ಟಿರುವುದು !

**ಬೀಬಿ**—(ನೋಡಿ ಆಶ್ಚರ್ಯದಿಂದ) ಆಹಾ ! ಎಂತಹ ತಂತುಗಳಿಂದ ಎಷ್ಟು ಮನೋಹರವಾಗಿ ನೇಯಲ್ಪಟ್ಟಿರುವುದು !

**ಕಬೀರ**—ಯೋಗಮಾಯಾತಂತುಗಳಿಂದ ಪ್ರಪಂಚವೆಂಬ ದಿವ್ಯವಸ್ತ್ರವನ್ನು ನೆಯ್ದಿರುವ ಆ ತ್ರಿಲೋಕಾಧಿಪತಿಗೆ ಈ ಸಾಮಾನ್ಯ ವಸ್ತ್ರವನ್ನು ನೇಯುವುದು ಯಾವ ಮಹತ್ಕಾರ್ಯವು ! ಭಕ್ತಾನುಗ್ರಹಾರ್ಥವಾಗಿ ಶ್ರೀರಾಮಚಂದ್ರನು ಈ ವಿಧವಾದ ಕಾರ್ಯವನ್ನು ಮಾಡಿರುವನು.

**ಬೀಬಿ**—ಇದೆಲ್ಲವೂ ನಿಮ್ಮ ರಾಮಭಕ್ತಿಯ ಮಹಿಮೆಯು

**ಕಬೀರ**—ಶ್ರೀರಾಮಚಂದ್ರನು ಭಕ್ತಪರಾಧೀನನಲ್ಲವೆ! ಇನ್ನು ನಾಳೆಯದಿನ ಈ ವಸ್ತ್ರವನ್ನು ವಿಕ್ರಯಿಸಿ ಆಹಾರಕ್ಕೆ ಆಧಾರಮಾಡಿಕೊಳ್ಳೋಣ. ನೀನು ಇನ್ನು ಚಿಂತಿಸಬೇಡ.

**ಬೀಬಿ**—ಇನ್ನು ಚಿಂತೆಯೇತಕ್ಕೆ! ತಾವು ಬೆಳಗಾದಮೇಲೆ ವಸ್ತ್ರವನ್ನು ವಿಕ್ರಯಿಸಿಕೊಂಡು ಬರುವಷ್ಟರಲ್ಲಿ ನಾನು ಗಂಗಾಸ್ನಾನ ಮಾಡಿ ಬಂದು ತಮ್ಮ ರಾಮಪೂಜೆಗೆ ಅಣಿಮಾಡುವೆನು.

**ಕಬೀರ**—ಹಾಗೆಯೇ ಆಗಲಿ. (ಹೋಗುವರು)

**ದೃಶ್ಯ ೩ (ಕಾಶೀನಗರದ ಬೀದಿಯಲ್ಲಿ ತನ್ನ ಮನೆಯ ಮುಂದೆ ರತ್ನಾಕರನೆಂಬ ಧನಿಕನು ಲಿಂಗನೆಂಬ ಸೇವಕನೊಡನೆ ಪ್ರವೇಶಿಸುವನು.)**

**ರತ್ನಾಕರ**—ವಿನೋದ ಸಂಚಾರಕ್ಕಾಗಿ ಹೊರಡಲು ಬೆಳಗಾಗುತ್ತಲೇ ಬರುವೆನೆಂದು ಹೇಳಿದ್ದ ಮಿತ್ರನಾದ ಕಾಕೋದರನು ಇಷ್ಟುಹೊತ್ತಾದರೂ ಬರಲೇಯಿಲ್ಲವಲ್ಲಾ! (ಸೇವಕನನ್ನು ನೋಡಿ) ಎಲವೋ, ಲಿಂಗಾ, ಕಾಕೋದರನು ಇಷ್ಟು ಹೊತ್ತಾದರೂ ಬರಲಿಲ್ಲ, ಬೇಗಹೋಗಿ ಆತನನ್ನು ಕರೆದುಕೊಂಡು ಬಾ.

**ಸೇವಕ**—ಸ್ವಾಮಿಾ, ತಾವೇನೋ ದರ್ಮರಾಯನಂಥ ಧಣಿಗಳು! ಆತನಿಗೆ ಬಹು ಸಲಿಗೆಸ್ವಾತಂತ್ರ್ಯಗಳನ್ನು ಕೊಟ್ಟಿರುವುದರಿಂದ ನನ್ನನ್ನು ತುಚ್ಛವಾಗಿ ಕಾಣುವನು, ಅಲ್ಲದೆ, ಆತನು ಯಾವಾಗಲೂ ನಾಯಕಿಯರ ಮನೆಗಳಲ್ಲಿಯೂ, ಪಾನಮಂದಿರಗಳಲ್ಲಿಯೂ, ಜೂಜಾಡುವಕಡೆಗಳಲ್ಲಿಯೂ ಇರುವನಲ್ಲದೆ ಆತನಿಗೆ ಬೇರೆ ಸ್ಥಳವೇಯಿಲ್ಲ. ಅಂಥ ಸ್ಥಳಗಳಿಗೆ ಹೋಗಲು ಸೇವಕನಾದ ನನಗೇ ನಾಚಿಕೆಯಾಗುತ್ತಿರುವುದು. ಆ ಪುಣ್ಯಾತ್ಮನನ್ನು ನಾನೆಲ್ಲ ಹುಡುಕಲಿ!

**ರತ್ನಾಕರ**—ಎಲವೋ! ನಿನ್ನ ತಲೆಹರಟೆಗಳು ಸಾಕು; ಅವನೆಂಥವನಾದರೂ ಆಗಲಿ, ನನ್ನಮಿತ್ರನು; ನೀನು ಅವನನ್ನು ನನ್ನಂತೆಯೇ ಕಾಣಬೇಕು.

**ಲಿಂಗ**—(ಖಿನ್ನನಾಗಿ ಆತ್ಮಗತ) ಸೇವಾವೃತ್ತಿಯು ಬಹಳ ಕೆಟ್ಟುದು; ಇವರಲ್ಲಿ ಯಾರಿಗೆ ಯಾರು ಕಡಿಮೆ! ದುರ್ಮಾರ್ಗಪ್ರವರ್ತನೆಯಲ್ಲಿ ಅವನಿ

ಗಿಂತಲೂ ಇವನು ಹೆಚ್ಚು, ಇವನಿಗಿಂತಲೂ ಅವನು ಹೆಚ್ಚು; ನಾನು ನಮ್ಮ ತಂದೆಯ ಕಾಲದಿಂದಲೂ ಉಂಡು ಉಟ್ಟು ಬೆಳೆದ ಮನೆಯೆಂಬ ಅಭಿಮಾನದಿಂದಲೂ ಈ ಹಾಳು ಹೊಟ್ಟೆಗಾಗಿಯೂ ಈ ಅವಿವೇಕಿಗಳ ಸೇವೆಯನ್ನು ಮಾಡಿಕೊಂಡಿರಬೇಕಾಗಿದೆ, ಏನು ಮಾಡುವುದು! ದಣಿಯಪ್ಪಣೆಯೆಂತಹುದಾಗಲಿ ನಡೆಯಿಸಬೇಕಾದುದು ಸೇವಕನ ಧರ್ಮ. ಇರಲಿ, (ಪ್ರಕಾಶಂ) ಸ್ವಾಮಿ, ಅಪ್ಪಣೆ. (ಮುಂದೆನೋಡಿ) ಅದೋ! ತಮ್ಮ ಸ್ನೇಹಿತರಿತ್ತಲೇ ಬರುತ್ತಿರುವರು.

ರತ್ನಾಕರ—ಓಹೋ, ಬಂದನೋ! (ನೋಡಿ) ಮಿತ್ರಾ ಕಾಕೋದರಾ ಇದೇಕೆ ಇಷ್ಟು ಹೊತ್ತಾಯಿತು ನೀನು ಬರುವುದು? ಎಲ್ಲಿ ಹೋಗಿದ್ದೆ?

ಕಾಕೋದರ—(ಪ್ರವೇಶಿಸಿ) ಮಿತ್ರಾ, ನಾನೇನೋ ಬೇಗನೆ ಬರಬೇಕೆಂದೇ ಹೊರಟೆನು. ಆದರೆ ಮಾರ್ಗದಲ್ಲಿ ನನ್ನ ಪೂರ್ವಸ್ನೇಹಿತನೊಬ್ಬನು ಸಿಕ್ಕಿದನು. ಅವನೊಡನೆ ಮಾತನಾಡಬೇಕಾದ ಕೆಲವು ಗೋಪ್ಯವಿಷಯಗಳಿದ್ದುವು. ಆಹುದರಿಂದ ಸಾವಕಾಶವಾಯಿತು.

ರತ್ನಾಕರ—ಚಿಂತೆಯಿಲ್ಲ, ಈಗ ನಾವು ಯಾವ ಕಡೆ ಸಂಚಾರ ಹೊರಡೋಣ?

ಲಿಂಗ—ಸ್ವಾಮಿ ಆ ತೋಪಿನಕಡೆ ನಿರ್ಜನವಾಗಿರುವುದು; ಆಕಡೆ ದಯಮಾಡಿಸ ಬಹುದು.

ರತ್ನಾಕರ—ಮಿತ್ರಾ, ಆಕಡೆ ಹೋಗೋಣವೇ?

ಕಾಕೋದರ—ಸರಿ! ಆಳಿನ ಮಾತು ಕೇಳು, ಆ ವುದ್ದೇಶವೇ ಹಾಳು.

ಲಿಂಗ—ಸ್ವಾಮಿ, ನನ್ನ ಮಾತು ಕೇಳಿದರೆ ಹಾಳು, ತಮ್ಮ ಮಾತು ಕೇಳಿದರೆ ಗೋಳು, ತಮ್ಮಮಾತನ್ನೇ ಕೇಳಲಿ ಸ್ವಾಮಿ.

ಕಾಕೋದರ—ಛೀ! ಅವಿವೇಕೀ! ಎಷ್ಟೋ ಹರಟೆ?

ಲಿಂಗ—ನಿಜ, ಸ್ವಾಮಿ, ತಮ್ಮ ಮುಂದೆ ನಾನವಿವೇಕಿಯಲ್ಲವೆ? ಪಾಪ! ತಮ್ಮ ವಿವೇಕದಿಂದಲೇ ನಮ್ಮ ಒಡೆಯನು ಈ ಸ್ಥಿತಿಗೆ ಬಂದುದು.

**ಕಾಕೋ**—ಸಂದೇಹವೇನು! ನಾನಿಲ್ಲದಿದ್ದರೆ ಈತನಿಗೆ ಈ ವಿನೋದವಿಲಾಸಗಳಿಲ್ಲಿಯವು! ಹಿಂದುಮುಂದರಿಯದೆ ಹರಟಬೇಡ (ರತ್ನಾಕರನನ್ನು ನೋಡಿ) ಮಿತ್ರಾ! ನೀನು ಈ ಲಿಂಗನಿಗೆ ಬಹಳ ಸಲಿಗೆಯನು ಕೊಟ್ಟಿರುವೆ, ಆದರಿಂದ ಇವನು ಮಿತಿಮೀರಿ ಹರಟುತ್ತಿರುವನು.

**ರತ್ನಾಕರ**—ಎಲವೋ ಲಿಂಗಾ, ಸರಸದಲ್ಲಿ ವಿರಸವನ್ನು ತರಬೇಡ, ಸಾಕು ಸುಮ್ಮನಿರೋ! (ಕಾಕೋದರನನ್ನು ನೋಡಿ) ಕಾಕೋದರಾ! ಅವನೆಷ್ಟಾದರೂ ಸೇವಕ, ಅವನ ಮಾತಿಗೆ ಬೆಲೆಯೇನು? ಈಗ ನಾವು ಯಾವಕಡೆ ಹೋಗೋಣ ಹೇಳು

**ಕಾಕೋದರ**—ಕೇಳು, ಈಗ ಆ ತೋಪಿನಕಡೆ ಹೋದರೆ ಉಪಯೋಗವಿಲ್ಲ, ಗಂಗಾನದಿಯ ಸ್ನಾನಘಟ್ಟದ ಕಡೆಗೆ ಹೋದರೆ ನಮಗೆ ಎರಡು ಅನುಕೂಲಗಳುಂಟು.

**ರತ್ನಾಕರ**—ಅದು ಹೇಗೆ?

**ಕಾಕೋದರ**—ಹೇಗೆಂದರೆ, ವ್ಯಾಯಾಮವಾಗುವುದೊಂದು, ಅದು ಹಾಗಿರಲಿ, ಮುಖ್ಯವಾದುದು ಮತ್ತೊಂದಿದೆ, ನಿನೆನ್ನುವೆಯೋ? ಸ್ನಾನಘಟ್ಟಕ್ಕೆ ಸ್ಥಳ ಪರಸ್ಥಳದ ಸ್ತ್ರೀಪುರುಷರನೇಕರು ಬಂದೇ ಇರುವರು, ಅಲ್ಲಿ ನಮ್ಮ ಇಚ್ಛೆ ಬಂದಕಡೆ ದೃಷ್ಟಿಪ್ರಸರಣಮಾಡಿ ಆನಂದ ಪಡಬಹುದು, ಅಲ್ಲಿ ಅಪೂರ್ವವಾದ ಮತ್ತು ನಿನಗರ್ಹವಾದ ವಸ್ತುಗಳು ಎಷ್ಟೋ ಇರಬಹುದು; ಅವುಗಳಲ್ಲಿ ಶ್ರೇಷ್ಠವಾದವುಗಳನ್ನು ನಾವು ಉಪಾಯದಿಂದ ಸಂಗ್ರಹಿಸುವುದಕ್ಕೂ ಅನುಕೂಲವಾಗುವುದು ಏನು ಹೇಳುವೆ?

**ರತ್ನಾಕರ**—ಕಾಕೋದರಾ, ನೀನೆಂತಹ ಆಲೋಚನಾಪರನು! ನನಗಿದು ತೋರಲೇ ಇಲ್ಲವಲ್ಲಾ! ಈಗ ನನಗೆ ಬಹಳ ಸಂತೋಷವಾಯಿತು. ಹೇಗಾದರೂ ನನ್ನ ಹಿತಚಿಂತಕನಾದುದಕ್ಕೆ ನನಗೆ ಒಳ್ಳೆಯಾಲೋಚನೆಯನ್ನೇ ಹೇಳಿದೆ ಬಾ! ಹಾಗಾದರೆ ಗಂಗಾತೀರಕ್ಕೆ ಹೋಗೋಣ ಲ

**ಲಿಂಗ**—(ಆತ್ಮ) ಇವನಲ್ಲಿನ ಸಾರವನ್ನು ಹೀರುವುದಕ್ಕೆ ಇದೊಂದಾಟವನ್ನು ಹೂಡಿಬಿಟ್ಟನು, ಆಗಲಿ, ಎಲ್ಲವನ್ನೂ ನೋಡುತ್ತಿರುವೆನು.

(ಹೋಗುವರು.)

ದೃಶ್ಯ ೪ (ಗಂಗಾಸ್ನಾನಘಟ್ಟದಲ್ಲಿ ಅನೇಕರು ಸ್ನಾನಾದಿಗಳನ್ನು ಮಾಡುತ್ತಿರುವರು.)

**ಬೀಬಿ**—(ಪ್ರವೇಶಿಸಿ ಬಟ್ಟೆಯನ್ನೊಗೆಯುತ್ತಿರುವಳು)

**ರತ್ನಾಕರ**—(ಕಾಕೋದರನೊಡನೆ ಪ್ರವೇಶಿಸಿ) ಮಿತ್ರಾ, ಬಹಳ ಮನೋಹರವಾದ ಕಡೆಗೆ ಕರೆದುಕೊಂಡು ಬಂದೆ. ಈ ಸ್ಥಳವು ಎಷ್ಟು ರಮಣೀಯವಾಗಿರುವುದು !

**ಕಾಕೋ**-ರಮಣೀಯವಾಗಿರುವುದೋ ರಮಣೀಮಯವೇ ಆಗಿರುವುದೋ !

**ರತ್ನಾಕರ**—ಆಹಾ ! ನಿಜ ! ಎಂತೆಂತಹ ದಿವ್ಯಾಕೃತಿಗಳು !

**ಲಿಂಗ**—(ಆತ್ಮ) ಈ ಆಕೃತಿಗಳೇ ಮನಸ್ಸಿಗೆ ವಿಕೃತಿಯನ್ನುಂಟುಮಾಡುವುದು.

**ರತ್ನಾಕರ**—(ಸ್ತ್ರೀಯರನ್ನು ನೋಡುತ್ತ ಕಬೀರದಾಸನ ಪತ್ನಿಯನ್ನು ನೋಡಿ ಆಶ್ಚರ್ಯದಿಂದ,) ಮಿತ್ರಾ ಕಾಕೋದರಾ, ಅಲ್ಲಿ ನೋಡು ; ಎಂತಹಮನೋಹರಾಕಾರವು ! ಏನು ಸೌಂದರ್ಯ !

೯ ಕಂ|| ಇಂದುವನರವಿಂದವನುರೆ |
ಮಂದಸ್ಮಿತವದನದಿಂದಮಕ್ಷಿದ್ವಯದಿಂ ||
ಇಂದೀವರಮಂ ನಾಚಿಸ |
ಸುಂದರಿಯಿವಳಂಗಭವನ ನವಮೋಹಿನಿಯೋ ! ||೮||

**ಲಿಂಗ**—(ಆತ್ಮ) ಪ್ರಾರಂಭವಾಯಿತು ! ಹುಚ್ಚು.

**ರತ್ನಾಕರ**—ಮಿತ್ರಾ ! ಅತ್ಯಂತ ಚತುರನಾದ ಶಿಲ್ಪಿಯ ಕೌಶಲ್ಯದಿಂದಲೂ ಚಿತ್ರಿಸಲು ಸಾಧ್ಯವಲ್ಲದಂತಿರುವ ಈ ಮಧುರಾಕೃತಿಯು ನನ್ನ ಮನಸ್ಸನ್ನಾಕರ್ಷಿಸಿರುವುದು ; ಆಹಾ ! ಕಡೆಗಣ್ಣೋಟಗಳಿಂದ ಕಾಮಬಾಣಗಳು ಪುಂಖಾನುಪುಂಖಗಳಾಗಿ ಬಂದು ನನ್ನೆದೆಯನ್ನು ಭೇದಿಸುತ್ತಿರುವುವು. ಈಗ ನೀನು ನಿನ್ನ ಕೌಶಲವನ್ನು ತೋರಿ ನನ್ನ ತಾಪವನ್ನಾರಿಸಬೇಕು.

**ಕಾಕೋದರ**—ಈ ವಿಷಯಗಳಲ್ಲಿ ನೀನು ನನ್ನ ಚಾತುರ್ಯವನ್ನು ಅನುಭವ ದಿಂದ ತಿಳಿದೇ ಇರುವೆಯಲ್ಲವೇ !

**ಲಿಂಗ**—(ಆತ್ಮ) ಆ ಚಾತುರ್ಯದಿಂದಲೇ ಈತನ ಗಂಟು ಕರಗುತ್ತಿರುವುದು.

**ರತ್ನಾಕರ**—ಆಹಾ ! ತಿಳಿದಿರುವೆನು, ಆದಕ್ಕಾಗಿಯೇ ನನ್ನಭಿಲಾಷೆಯನ್ನು ಆಪ್ತನಾದ ನಿನ್ನಲ್ಲಿ ತಿಳಿಸಿದುದು , ಆದರೆ ಬಹಳ ಜಾಗರೂಕತೆಯಿಂದ, ಕಾರ್ಯವು ವಿಫಲವಾಗದಂತೆ ನೀನು ಸಂವಿಧಾನಗಳನ್ನು ಕಲ್ಪಿಸಿ, ಆ ಸುಂದರಿಯು ನನಗೆ ಸಂಧಿಸುವಂತೆ ಸಂಧಾನಮಾಡಬೇಕು.

**ಕಾಕೋದರ**—ಮಿತ್ರಾ ! ಏನು ಹೀಗೆ ಹೇಳುವೆ ? ಹಿಂದೆ ಆ ಮಧುಮೋಹಿ ನಿಯನ್ನು ಗಂಡನಿಂದ ಅಗಲಿಸಿ ನಿನ್ನ ವಶಪಡಿಸಲು ನಾನು ಎಂತೆಂ ತಹ ಸಂವಿಧಾನಗಳನ್ನು ಕಲ್ಪಿಸಿದೆನೆಂಬುದನ್ನು ಮರೆತೆಯೋ ?

**ಲಿಂಗ**—(ಆತ್ಮ) ಆಹಾ ! ಎಂತಹ ಪುಣ್ಯಕಾರ್ಯ ! ಇಂಥವರೇ ಲೋಕೋ ಪಕಾರಿಗಳು !

**ರತ್ನಾಕರ**—ನಿಜ, ನೀನು ಸಂಧಾನಿಯೇ ಸರಿ ; ಆದರೂ ಎಚ್ಚರದಿಂದ ಕಾರ್ಯಮಾಡು ಈಗ ಈ ಲೋಕಮೋಹಿನಿಯನ್ನು ನೋಡಿದ ಮೇಲೆ ಆ ಮಧುಮೋಹಿನಿಯ ರೂಪವು ನನಗೆ ಅಸಹ್ಯಕರವಾಗಿರುವುದು.

**ಲಿಂಗ**—ನಾಳೆ ಮತ್ತೊಬ್ಬಳನ್ನು ನೋಡಿದರೆ ಈ ರೂಪವೂ ಅಸಹ್ಯಕರ ವಾಗುವುದು !

**ಕಾಕೋದರ**—ಮಿತ್ರಾ , ಅಭಿನವವಸ್ತುಗಳಲ್ಲಿ ಅಭಿರುಚಿಯುಳ್ಳ ನೀನ ಲ್ಲವೇ ರಸಿಕಶಿಖಾಮಣಿ !

**ಲಿಂಗ**—(ಆತ್ಮ) ಹೀಗೆ ಉಬ್ಬಿಸಿದರೆತಾನೆ, ಅವನ ಹುಚ್ಚು ಹೆಚ್ಚಾಗಿ ಇವನು ಕೇಳಿದಷ್ಟು ಹಣವನ್ನೆಣಿಸಿಬಿಡುವನು ! ಇಂತಹ ಆಟಗಳನ್ನು ಹೂ ಡಿಯೇ ಅವನನ್ನು ತೆಳ್ಳಗೆ ಮಾಡಿ ತಾನು ದಪ್ಪನಾದುದು. ಈ ಬೇಳು ವೆಯ ಹೊಗಳಿಕೆಗೆ ಬೆರಗಾಗಿ ಆ ಮಂಗನು ಕೇಳಿದುದನ್ನು ಕೊಟ್ಟು ಬಿಡುವನೆಂದು ತಿಳಿದೇ ಈ ಮೋಸಗಾರನು ಇಂತಹ ಆಸೆಗಳನ್ನು ಹುಟ್ಟಿಸಿ ಮಂಗಕ್ಕೆ ತಕ್ಕ ಭಂಗಿಯನಿಟ್ಟು ಕುಣಿಸಿ ತನ್ನ ಹೊಟ್ಟೆ ಯನ್ನು ತುಂಬಿಕೊಳ್ಳುತ್ತಿರುವನು !

**ರತ್ನಾಕರ**—ಮಿತ್ರಾ! ಇದು ಎಂತಹ ಅಪೂರ್ವವಸ್ತುವು! ಈ ರೂಪಕ್ಕೆ ತಕ್ಕ ವಸ್ತ್ರಾಭರಣಗಳಿಲ್ಲದಿದ್ದರೂ ಈಕೆ ಎಷ್ಟು ಮನೋಹರವಾಗಿ ಶೋಭಿಸುವಳು! ತಕ್ಕ ಅಂದವಾದ ವಸ್ತ್ರಭೂಷಣಾಲಂಕಾರಮಾಡಿದರೆ ಇನ್ನು ಹೇಗೆ ಪ್ರಕಾಶಿಸುವಳೋ ಕಾಣೆನು, ಈಕೆ ಯಾರಿರಬಹುದು?

**ಕಾಕೋದರ**—ಸರಿ! ಯಾವನೋ ನಿತ್ಯದರಿದ್ರನ ಪತ್ನಿಯೇ ಆಗಿರಬೇಕು. ಇಲ್ಲವಾದರೆ ಎಂಥವನಾದರೂ ಈ ರೂಪಕ್ಕೆ ತಕ್ಕ ವಸ್ತ್ರಭೂಷಣಗಳನ್ನು ತಂದುಕೊಡದೆ ಇರುತ್ತಿದ್ದನೇ?

**ರತ್ನಾಕರ**—ನಿಜ, ಇದು, ಇವಳನ್ನು ನಮ್ಮ ಬಲೆಗೆಳೆದುಕೊಳ್ಳಲು ಅನುಕೂಲವಲ್ಲವೇ?

**ಲಿಂಗ**—(ಆತ್ಮ) ಅದು ಹೇಗಾದರೂ ಇರಲಿ, ಮಂಕುದಾಸಯ್ಯನಾದ ನಿನ್ನನ್ನು ಮಾಯಾವಿಯಾದ ಇವನು ತನ್ನ ಬಲೆಗೆಳೆದುಕೊಳ್ಳುವುದಕ್ಕೆ ಒಳ್ಳೆಯ ಅನುಕೂಲವಾಯಿತು.

**ಕಾಕೋದರ**—ನಿಜ, ಮಿತ್ರಾ! ನೀನು ಹೇಳಿದಂತೆ, ಇವಳಿಗೆ ಉತ್ತಮವಾದ ವಸ್ತ್ರಾಭರಣಗಳ ಆಸೆಯನ್ನು ಹುಟ್ಟಿಸಿದರೆ ಬಿದ್ದಂತೆಯೇ ಬಲೆಗೆ!

**ಲಿಂಗ**—(ಆತ್ಮ) ನಿಜ, ಇವನು ಬಿದ್ದಂತೆಯೇ ನಿನ್ನ ಬಲೆಗೆ.

**ರತ್ನಾಕರ**—ನಿಜ. ನಿಜ, ಆದರಿಂದ ಈಗ ಮೊದಲು ಅವಳು ಯಾರೆಂಬುದನ್ನು ತಿಳಿದು ಮುಂದಿನ ಪ್ರಯತ್ನಗಳನ್ನು ಮಾಡುವುದೇ ಸರಿ (ಸೇವಕನನ್ನು ನೋಡಿ) ಲಿಂಗಾ,

**ಲಿಂಗ**—ಬುದ್ಧೀ!

**ರತ್ನಾಕರ**—ಆ ಹಳೆಯ ಸೀರೆಯನ್ನುಟ್ಟು ಒಂಟಿಯಾಗಿ ಬಟ್ಟೆಯನ್ನೊಗೆಯುತ್ತಿರುವ ಆಕೆ ಯಾರೆಂಬುದನ್ನು ತಿಳಿದುಕೊಂಡು ಬಾ, ಆದರೆ ಆಕೆಯನ್ನೇ ಕೇಳಬೇಡ, ಮತ್ತೆ ಯಾರನ್ನಾದರೂ ಕೇಳು,

**ಲಿಂಗ**—(ಆತ್ಮ) ಈ ಅವಿವೇಕಿಗಳ ಅಧರ್ಮಕಾರ್ಯಗಳಿಗೆ ನಾನು ಸಹಾಯ ಮಾಡಬೇಕಾಯಿತಲ್ಲಾ! (ಚಿಂತಿಸಿ) ಬಚ್ಚಲನ್ನು ಬಾಚುವನು ಕ್ರಿಕೆಸರಾಗುವುದೆಂದರಾಗುವುದೇ! ಇಂಥವರ ಸೇವೆಯಲ್ಲಿದ್ದ ಮೇಲೆ, ಅವರು ಹೇಳಿದುದನ್ನು ಮಾಡದಿದ್ದರಾಗುವುದೇ! ಮಾಡುವುದೇನು

ದಣಿಯಾಜ್ಞೆಯನ್ನು ನಡೆಯಿಸುವುದು ಸೇವಕನ ಕರ್ತವ್ಯ. ತಾವೆ ಹೋಗಿ ಕೇಳಿದರೆ ಮರ್ಯಾದೆಯಾಗುವುದೆಂದು ನನಗೆ ಹೇಳಿರುವರು ! ಇರಲಿ, (ಪ್ರಕಾಶಂ) ಆಗಲಿ ಬುದ್ಧಿ

(ಮುಂದೆ ಹೋಗಿ ಒಬ್ಬ ಸ್ತ್ರೀಯನ್ನು ನೋಡಿ) ತಾಯಿಾ, ಆಕೆ ಯಾರು ?

**ಸ್ತ್ರೀ**—ಆಕೆಯು ನಮ್ಮ ಊರಲ್ಲಿರುವ ಕಬೀರದಾಸರ ಪತ್ನಿಯು.

**ಲಿಂಗ**—(ರತ್ನಾಕರನ ಬಳಿಗೆ ಬಂದು) ಸ್ವಾಮಿಾ, ಆಕೆಯು ಕಬೀರದಾಸರ ಪತ್ನಿಯಂತೆ.

**ಕಾಕೋದರ**—ಓಹೋ ! ಕಬೀರದಾಸನ ಪತ್ನಿಯೋ ! ಸರಿ ! ಸರಿ ! ಮಿತ್ರಾ! ರತ್ನಾಕರಾ, ನಾನವನನ್ನು ಬಲ್ಲೆನು, ಯಾವಾಗಲೂ ರಾಮಧ್ಯಾನ ಮಾಡಿಕೊಂಡು ತಿರುಗುತ್ತಿರುವನು

**ರತ್ನಾಕರ**—ಏನು ಏನು ? ಕಬೀರದಾಸನೇ ? ಇದೇನಯ್ಯಾ ! ಕಬೀರದಾಸ ನೆಂದರೆ ಮಹಮ್ಮದೀಯನಲ್ಲವೇ ? ರಾಮಧ್ಯಾನಮಾಡುವನೆಂದು ಹೇಳುವೆಯಲ್ಲಾ !

**ಕಾಕೋದರ**—ಅಯ್ಯಾ ! ಈಗಿನ ಕಾಲದ ವಿಚಿತ್ರಗಳು ಒಂದೊಂದು ವಿಧ ವಲ್ಲ. ಅವೆಲ್ಲವನ್ನೂ ನೀನೇನು ಬಲ್ಲೆ ! ಯಾವ ಜಾತಿಯಾದರೇನು ! ಕೆಲಸಮಾಡಿ ಜೀವನವನ್ನು ಸಂಪಾದಿಸಿಕೊಳ್ಳಲಾರದ ಸೋಮಾರಿಗಳು ಕೆಲವರು, ತುಳಸೀಮಣಿ ನಾಮಗಳನ್ನಾಗಲಿ, ರುದ್ರಾಕ್ಷ ವಿಭೂತಿಗಳ ನ್ನಾಗಲಿ, ಬಲವಾಗಿ ಧರಿಸಿಕೊಂಡು "ರಾಮರಾಮಾ !" "ಶಿವಶಿವಾ !" ಎಂದು ಬೀದಿಬೀದಿಗಳಲ್ಲಿ ತಿರುಗುತ್ತ ತಾವು ಬ್ರಹ್ಮಜ್ಞಾನಿಗಳಾದ ಮಹ ನೀಯರೆಂದು ಮಂಕುಜನರು ತಿಳಿಮಕೊಂಡು ಮರ್ಯಾದೆಮಾಡಿ ಧನ ಧಾನ್ಯಗಳನ್ನು ತಮಗೊಪ್ಪಿಸಿ ಪೂಜಿಸುವರೆಂದು, ದಾಸರೆಂತಲೂ ಸಾಧುಗಳೆಂತಲೂ ವೇಷಗಳನ್ನು ಹಾಕಿಕೊಂಡು ಉಂಡಾಡಿಗರಾಗಿ ಕಾಲವನ್ನು ಕಳೆಯುತ್ತಿರುವರು. ಅಂಥವರಲ್ಲಿ ಇವನೊಬ್ಬನು !

**ರತ್ನಾಕರ**—ಸರಿ, ಸರಿ, ಹಾಗೋ ? ಹಾಗಾದರೆ ಸದ್ಯಕ್ಕೆ ಇವಳನ್ನು ಸಾಧಿ ಸುವ ಬಗೆ ಹೇಗೆ ?

**ಕಾಕೋದರ**—ಅವನು ಹೀಗಿರುವುದು ನಮಗೆ ಬಹಳ ಅನುಕೂಲವಲ್ಲವೇ ?

**ರತ್ನಾಕರ**—ಅದು ಹೇಗೆ ಅನುಕೂಲ ?

**ಕಾಕೋದರ**—ಹೇಗೆಂದರೆ, ಇಂತಹ ದಾಸರೆಲ್ಲರೂ ಮಂಕುದಾಸಯ್ಯಗಳೇ! ಇವರು ಶೃಂಗಾರರಸದ ಗಂಧವನ್ನೇ ಅರಿಯರು. ಅದರಿಂದ ಪತ್ನಿಯು ಎಂತಹ ರೂಪಯೌವನಶಾಲಿನಿಯಾಗಲಿ, ಚತುರೆಯಾಗಲಿ, ರಸಿಕಳಾಗಲಿ, ರಂಭೆಯೇ ಆಗಲಿ, ಅವನಿಗೆ ಆಕೆಯಲ್ಲಿ ಅನುರಾಗವೂ ಇಲ್ಲ, ವಿಲಾಸವೂ ಇಲ್ಲ ಹೀಗೆ ಅವಳಲ್ಲಿ ಇವನಿಗೆ ಉಪೇಕ್ಷೆ ಇವನಲ್ಲಿ ಅವಳಿಗೆ ಉಪೇಕ್ಷೆ, ನಮಗಂಥವಳಲ್ಲಿ ...ಅಪೇಕ್ಷೆ.

**ಲಿಂಗ**—(ಆತ್ಮಗತ) ನಿಮಗೆ ಯಮಶಿಕ್ಷೆ.

**ಕಾಕೋದರ**—ಹೀಗಿರುವಲ್ಲಿ ಅವಳಿಗೆ ತಕ್ಕ ವಸ್ತ್ರಾಭರಣಗಳನ್ನು ತಂದು ಕೊಡಲು ಆ ಗಂಡನೆಂಬುವನಿಗೆ ಮನಸ್ಸಿರುವುದೇ .ಅಥವಾ ಗತಿಯಿರುವುದೇ ?

**ರತ್ನಾಕರ**—ಇಲ್ಲ, ನಿಜ, ನಿಜ, ಆದರೆ ಮುಂದಿನ ಕಾರ್ಯಕ್ಕೆ ಸಂಧಾನಮಾಡುವುದು ನಿನ್ನ ಭಾರ !

**ಕಾಕೋದರ**—ಆಗಲಿ, ಸಂಧಾನಮಾಡುವುದು ನನ್ನ ಭಾರ, ಸಹಾಯಮಾಡುವುದು ನಿನ್ನ ಭಾರ.

**ಲಿಂಗ**—(ಆತ್ಮ) ಕೋತಿಯು ಬಲೆಗೆ ಬಿತ್ತು. ಇನ್ನು ಹೇಗೆಬೇಕಾದರೂ ಕುಣಿಸಬಹುದು

**ರತ್ನಾಕರ**—ಇನ್ನು ನನ್ನಿಂದಾಗಬೇಕಾದುದೇನು ? ಹೇಳು.

**ಕಾಕೋ**—ಏನೆಂದು ಕೇಳಬೇಕೇ ? ಲೋಕದಲ್ಲಿ ಎಲ್ಲರಿಗೂ ಬೇಕಾದುದು ಯಾವುದೋ ಅದೆ.

**ರತ್ನಾಕರ**—ಯಾವುದು ?

**ಕಾಕೋದರ**—ಯಾವುದೇ ? ಹಣ. ಬಡವನನ್ನು ಬಲ್ಲವನನ್ನಾಗಿ ಮಾಡುವುದು ಯಾವುದು ? ಹಣ, ದೇಹತಾಪ ಮನಸ್ತಾಪಗಳನ್ನು ನಿವಾರಣೆ ಮಾಡುವುದು ಯಾವುದು ? ಹಣ, ಅಜ್ಞನಾದರೂ ಪ್ರಾಜ್ಞನೆನಿಸಿ ರಾಜಪೂಜಿತನನ್ನಾಗಿ ಮಾಡುವುದು ಯಾವುದು ? ಹಣ, ಕುರೂಪಿಯಾದರೂ ಸುರೂಪಿಯೆಂದು ಜನಗಳಿಂದ ಹೊಗಳಿಸುವುದು ಯಾವುದು ? ಹಣ, ವೃದ್ಧನಾದರೂ ಯುವಕನೆಂದು ಹೇಳಿಸುವುದು ಯಾವುದು ?

ಹಣ, ಒಲಿಯದಿರುವ ಸ್ತ್ರೀಯನ್ನು ಸಹ ಒಲಿಯುವಂತೆ ಮಾಡುವುದು ಯಾವುದು ? ಹಣ.

**ಲಿಂಗ**—(ಆತ್ಮಗತ) ಹಣ ! ಹಣ !! ಹಣ !!! ನಿನ್ನ ಹೆಣ !

**ಕಾಕೋದರ**—ಅಹುದೋ ಅಲ್ಲವೋ ? ನೀನೇ ಹೇಳು.

**ರತ್ನಾಕರ**—ನಿಜ, ನಿಜ, ನಿನ್ನ ಮಾತು ಸತ್ಯ.

**ಕಾಕೋದರ**—ಸರಿ, ಅದೇ ನಿನ್ನಿಂದಾಗಬೇಕಾದುದು. ನೀನು ಧಾರಾಳ ವಾಗಿ ಹಣವನ್ನು ವೆಚ್ಚಮಾಡಲು ಹಿಂಜರಿಯದಿದ್ದರೆ ಆ ರಮಣಿಗೆ ತಕ್ಕ ವಸ್ತ್ರಾಭರಣಗಳನ್ನು ತಂದು, ಅವುಗಳಲ್ಲಿ ಅವಳಿಗೆ ಆಸೆ ಹುಟ್ಟುವ ಸಂಧಾನಮಾಡಿ, ತಕ್ಕ ತಂತ್ರಗಳಿಂದ ಅವಳನ್ನು ಒಲಿಗೆ ಕೆಡಹುವೆನು.

**ರತ್ನಾಕರ**—ಮಿತ್ರಾ ! ಇಂತಹ ಸಮಯದಲ್ಲಿ ನಾನು ಹಣವನ್ನು ವೆಚ್ಚ ಮಾಡಲು ಹಿಂಜರಿಯುವೆನೇ ? ಅದಿರಲಿ, ಮತ್ತೆ ನೀನೀಕೆಯನ್ನೆಲ್ಲಿ ಕಾಣುವೆ ?

**ಕಾಕೋದರ**—ಇವಳು ಮನೆಗೆ ಹೋಗುವಾಗ ನಿಮ್ಮ ಮನೆಯ ಮುಂದೆಯೇ ಹೋಗಬೇಕು ; ಆಗ ಸಮಯ ನೋಡಿ ಸಂಧಿಸಿ, ಹೇಗೋ ಹಾಗೆ ಮಾತನ್ನಾರಂಭಿಸಿ, ಬಲೆಗೆ ಕೆಡಹುವೆನು, ನಿನಗಾ ಚಿಂತೆಯೇತಕ್ಕೆ ? ಹಣದ ಪೆಟ್ಟಿಗೆಯ ಬೀಗದ ಕೈಯನ್ನು ಕೊಡು

**ರತ್ನಾಕರ**—ಕೊಡಲೇನು ? ಇದೋ ! ತೆಗೆದುಕೋ ! (ಕೊಡುವನು)

**ಲಿಂಗ**—ಬುದ್ಧಿ ! ತಾವು ಇವರಿಗೆ ಬೀಗದ ಕೈಯನ್ನು ಕೊಡಿ ಅವರು ನಿಮಗೆ ಕೈ ಕೊಡುವರು ಅನುಮಾನವೇಕೆ ?

**ಕಾಕೋದರ**—ಎಲವೋ ! ಲಿಂಗಾ ಏನೋ ಅಧಿಕಪ್ರಸಂಗ ?

**ಲಿಂಗ**—ಅದೇನೋ ಸ್ವಾಮಿ ನನಗೆ ತಿಳಿಯದು ! ಹಾಗಾದರೆ ನೀವು ಇವರಿಗೆ ಮತ್ತೆ ಆ ಬೀಗದ ಕೈಯನ್ನು ಕೊಡುವುದಿಲ್ಲವೇನು ?

**ಕಾಕೋ**—ಕೊಡದೆ ಬೀಗದಕೈ ನನಗೇತಕ್ಕೆ ? ಬೇಕಾದಷ್ಟು ಹಣವನ್ನು ತೆಗೆದುಕೊಂಡು ಬೀಗದ ಕೈಯನ್ನು ಆತನಿಗೇ ಕೊಟ್ಟುಬಿಡುವೆನು.

**ಲಿಂಗ**—ಇದರಿಂದಲೇ ನೀವು ಅವರಿಗೆ ಕೈಕೊಡುವಿರೆಂದು ಹೇಳಿದೆನು. ಅಷ್ಟೆ !

**ಕಾಕೋದರ**—ಸರಿ, ಸರಿ, ನಿನಗೇತಕ್ಕೆ ಈ ಪ್ರಸಂಗ; ಸುಮ್ಮನಿರು.

**ರತ್ನಾಕರ**--(ಜೋರದಿಂದ) ಲಿಂಗಾ! ಸುಮ್ಮನಿರೋ! (ಆತ್ಮ) ಸರಸದಲ್ಲಿ ಒಳ್ಳೆಯ ವಿರಸ! ಕಾಕೋದರಾ! ಇದೋ! ಇನ್ನು ನನ್ನ ಕಾರ್ಯ ವಾಯಿತು, ನಿನ್ನ ಚಾತುರ್ಯವನ್ನು ನೀನು ಪ್ರಯೋಗಿಸಿ ಆಕಾಮಿನಿಗೆ ನನ್ನಲ್ಲಿ ಪ್ರೇಮಹುಟ್ಟುವಂತೆ ಮಾಡಬೇಕು

**ಲಿಂಗ**—(ಆತ್ಮ) ಸರಿ! ಮೊದಲು ಪ್ರೇಮ, ಆಮೇಲೆ ನಾಮ, ಕಡೆಗೆ ನಿರ್ನಾಮ

**ಕಾಕೋದರ**—ಹಾಗೆಯೇ ಆಗಲಿ, ನೀನು ಸಂಶಯಪಡಬೇಡ ಬಾ ಹೋಗೋಣ

**ಲಿಂಗ**—(ಆತ್ಮ) ದೊಡ್ಡ ಕೆರೆಗೆ ದೊಡ್ಡ ರೋಗವೇ ಹುಟ್ಟಿತು! ದೈವ ಚಿತ್ತ! ಏನು ಮಾಡುವುದು! ಏನೇನು ವಿಚಿತ್ರಗಳು ನಡೆಯುವುವೋ ನಡೆಯಲಿ, ನಾನು ಸೇವಕ, ಬಾಯಿತೆರದರೆ ಬಾಯಿಗೆ ಮಣ್ಣು ಬೀಳು ವುದು! (ಹೋಗುವರು)

ದೃಶ್ಯ ೫ (ರಾಜವೀಧಿಯಲ್ಲಿ ಕಬೀರನು ಶ್ರೀರಾಮನು ನೆಯ್ದ ವಸ್ತ್ರವನ್ನು ಮಾರಲು ತರುವನು.)

**ಕಬೀರ**—ಎಲ್ಲೆಲ್ಲಿ ವಿಚಾರಿಸಿದರೂ ಈ ವಸ್ತ್ರವನ್ನು ಕೊಳ್ಳುವರೇ ಇಲ್ಲವಲ್ಲಾ!

೧೦ ಕಂ|| ಸುವಿಮಲಗುಣಭೂಷಿತರೇ! |
ಅವಿರಳಲಕ್ಷ್ಮೀಕಟಾಕ್ಷಸಂಶೋಭಿತರೇ! ||
ನವಕೌಶೇಯಾಂಬರಮಿದ |
ನವಲೋಕಿಸಿ ಬೆಲೆಯನಿತ್ತು ಕೊಳ್ಳುದು ಜನರೇ ||೯||

(ರತ್ನಾಕರನನ್ನು ನೋಡಿ) ಸ್ವಾಮಿ! ಈ ವಸ್ತ್ರವನ್ನು ನೋಡಿ, ಇದು ಉತ್ತಮವಾದ ಎಳೆಗಳಿಂದ ಬಹಳ ಚೆನ್ನಾಗಿ ನೇಯಲ್ಪಟ್ಟಿರುವುದು.

**ರತ್ನಾಕರ**—(ನೋಡಿ) ಕಾಕೋದರಾ! ಇದನ್ನು ನೋಡಿದೆಯಾ?

**ಕಾಕೋದರ**—ಬಹಳ ಚೆನ್ನಾಗಿರುವುದು. ಆದರೆ ಇದರ ಬೆಲೆಯೇನೆಂಬು ದನ್ನು ತಿಳಿದೆಯೋ ?

**ಕಬೀರ**—ಸ್ವಾಮಿ! ಇದಕ್ಕೆ ತಮಗೆ ಯೋಗ್ಯವಾಗಿ ತೋರಿದ ಬೆಲೆಯನ್ನು ಕೊಡಬಹುದು.

**ಕಾಕೋದರ**—ಮಿತ್ರಾ! ಇದು ಅಮೂಲ್ಯವಾದುದು. ಸಾಮಾನ್ಯರು ಕೊಳ್ಳ ತಕ್ಕುದಲ್ಲ. ಇಷ್ಟು ಬೆಲೆಬಾಳುವ ವಸ್ತ್ರವು ನಮಗೇತಕ್ಕೆ ? ಈಗ ನಮಗೆ ಬೇರೆ ವಿಷಯಕ್ಕಾಗಿ ಹಣವು ಹೆಚ್ಚಾಗಿ ಬೇಕಾಗಿರುವುದಲ್ಲವೇ?

**ಲಿಂಗ**—(ಆತ್ಮ) ಆ ವಿಷಯದಿಂದಲೇ ಇವನಿಗೆ ವಿಷ ಬೀಳಬೇಕಾಗಿರುವುದು!

**ರತ್ನಾಕರ**—ನಿಜ! ನಿಜ! ಈಗ ಇಷ್ಟು ಬೆಲೆಬಾಳುವ ಈ ವಸ್ತ್ರವು ನಮಗ ನವಶ್ಯಕವೇ ಸರಿ ಸ್ವಾಮಿ! ಇದು ನಮಗೆ ಆವಶ್ಯಕವಿಲ್ಲ. (ಹಿಂದಕ್ಕೆ ಕೊಟ್ಟುಬಿಡುವನು)

**ಕಾಕೋದರ**—(ಬೇರೆಕಡೆ ಬಂದು) ಮಿತ್ರಾ! ರತ್ನಾಕರ! ಆ ರಮಣಿಯು ಗಂಗಾಸ್ನಾನಮಾಡಿ ಬರುವ ವೇಳೆಯಾಯಿತು. ನಾವು ಮನೆಯ ಮುಂ ದೆಯೇ ಕಾದಿದ್ದು ಮುಂದಿನ ಕಾರ್ಯವನ್ನು ಸಾಧಿಸೋಣ ಬಾ.

**ರತ್ನಾಕರ**—ಹಾಗೆಯೇ ಆಗಲಿ! ನಡೆ. (ಹೋಗುವರು)

**ಕಬೀರ**—ಕಂ|| ರಾಮಾ ನಿಜಪದನತಸು |
ತ್ರಾಮಾ ಸಂಗ್ರಾಮದಳಿತದನುಜಸ್ತೋಮಾ ||
ಸೀಮಾತೀತ ಲಸದ್ಗುಣ |
ಧಾಮಾ ಪಾಲಿವುದು ಪರಮಮಂಗಳನಾಮಾ ||೧೦||

ಕಡೆಗೂ ಇದನ್ನು ಯಾರೂ ಕೊಂಡುಕೊಳ್ಳಲಿಲ್ಲ! ಏನು ಮಾಡಲಿ! ಇಂತಹ ವಸ್ತ್ರವಿದ್ದೂ ವಿಕ್ರಯವಾಗದಿರುವುದು ಏನಾಶ್ಚರ್ಯವು

(ಚಿಂತಿಸುತ್ತ) ಶ್ರೀರಾಮಚಂದ್ರನ ಸಂಕಲ್ಪವನ್ನು ಬಲ್ಲವರು ಯಾರು! ಇದನ್ನು ಯಾಂಗೆ ಸೇರಿಸಬೇಕೆಂದು ಆತನ ಅಭಿಮತವಿರುವುದೋ ತಿಳಿಯದೆ ನಾನೇ ತಕ್ಕೆ ಚಿಂತಿಸಬೇಕು! ಹುಟ್ಟಿಸಿದ ರಾಮನು ಹುಲ್ಲು ಮೇಯಿಸುವನೇ ಹೊಟ್ಟೆಯನ್ನು ಹೊರೆದುಕೊಳ್ಳುವ ಕಾರ್ಯಕ್ಕೆ ಆತುರವೇಕೆ !

**ಶ್ರೀರಾಮಚಂದ್ರನು**—(ವೃದ್ಧಬ್ರಾಹ್ಮಣರೂಪದಿಂದ ಪ್ರವೇಶಿಸಿ)

೧೧ ಕಂ|| ಚಳಿಯಿಂದಕಟಕಟಾ ! ಮೈ |
ಸೆಳೆವುದು ಕಂಪಿಪುದು ಗರ್ಭಮಂಗದೆ ಪಿರಿದುಂ ||
ಪುಳಕಾಂಕುರವಾಗಿರಲಿ |
ನ್ನುಳಿಯದು ಮತ್ಪ್ರಾಣ ಮಕಟರಘುವರರಾಮಾ ||

**ಕಬೀರ**—(ಮುಂದೆ ನೋಡಿ) ಓಹೋ! ಈತನು ಯಾರು? ಅತಿ ವೃದ್ಧನಾದ ಬ್ರಾಹ್ಮಣನು ಚಳಿಯಲ್ಲಿ ನಡುಗುತ್ತ ಬರುತ್ತಿರುವನು. ಅಯ್ಯೋ! ಎಷ್ಟು ಚಳಿಯಿಂದ ನಡುಗುತ್ತ ಸಂಕಟಪಡುತ್ತಿರುವನು! ದೈವಕ್ಕೆ ಇಂಥವರಲ್ಲಿ ದಯೆಬಾರದಲ್ಲಾ! ಶ್ರೀರಾಮಾ! ಇಂತಹ ಅನಾಥರಾದ ಜನರ ಮೇಲೆ ನಿನ್ನ ಕಟಾಕ್ಷವು ಬೀಳಬಾರದೇ! ಅಯ್ಯೋ! ವೃದ್ಧ ಬ್ರಾಹ್ಮಣಾ! ನಿನ್ನನ್ನು ನೋಡಿ ನನಗೆ ವ್ಯಥೆಯಾಗುವುದಲ್ಲಾ! (ಸಂತೋಷದಿಂದ) ಓಹೋ! ಈ ವಸ್ತ್ರವು ವಿಕ್ರಯವಾಗದೇ ಹೋದುದು ಬಹಳ ಅನುಕೂಲವಾಯಿತು ಸರ್ವ ಚೈತನ್ಯಾತ್ಮಕನಾದ ಶ್ರೀರಾಮಚಂದ್ರನ ಸೇವೆ ಮಾಡಲು ನನಗವಕಾಶವೊದಗಿತು. ಇಂತಹ ವೃದ್ಧರಿಗೂ, ಅಬಲರಿಗೂ, ಅನಾಥರಿಗೂ, ರೋಗಪೀಡಿತರಿಗೂ, ದರಿದ್ರರಿಗೂ, ತನ್ನ ಕೈಯಿಂದಾದ ಸಹಾಯವನ್ನು ಮಾಡಿದರೆ ಪರಮಾತ್ಮನಿಗೆ ತೃಪ್ತಿಯಾಗುವುದು ಆದರಿಂದ ಈ ವಸ್ತ್ರವನ್ನೀ ವೃದ್ಧ ಬ್ರಾಹ್ಮಣನಿಗೆ ಹೊದಿಸಿ ಕಳುಹಿಸುವೆನು. (ವಸ್ತ್ರವನ್ನು ಮಡಿಸಿ) ಪೂಜ್ಯನೇ! ನಿನ್ನನ್ನು ನೋಡಿದರೆ ಬಹಳ ಬಡವನಂತೆ ತೋರುವೆ; ನಾನು ನಿನಗೆ ಇನ್ನು ಯಾವ ಸೇವೆಯನ್ನೂ ಮಾಡಲಾರೆನು. ಇದೋ

೧೨ ಕಂ|| ಧರಣೀಸುರವರ ನಿನಗೀ |
ವರವಸ್ತ್ರಮನೀವೆನಿಂದು ಸಂತಸದಿಂದಂ ||
ಧರಿಸುತಿದಂ ಸುಖದಿಂ ನೀ |
ನಿರು ರಘುತಿಲಕಾವತಾರ ನವಗುಣಹಾರಾ ||೧೨||

ಈ ವಸ್ತ್ರವನ್ನು ಹೊದ್ದುಕೋ (ಹೊದಿಸುವನು.)

**ಬ್ರಾಹ್ಮಣ**—ಆಹಾ! ಮಹಾತ್ಮನೇ! ಬಹಳ ಸಂತೋಷವಾಯಿತು! ನೀನು ಪುಣ್ಯಶಾಲಿಯು, ಭೂತದಯಾಪರನು, ದೈವಭಕ್ತನು, ನಿನಗೆ ಶ್ರೀ ರಾಮಚಂದ್ರನು ಮಂಗಳವನ್ನುಂಟುಮಾಡುವನು.

**ಕಬೀರ**—ಪೂಜ್ಯರೇ! ಧನ್ಯನಾದೆನು. (ಹೋಗುವನು.)

**ಶ್ರೀರಾಮ**—(ತನ್ನ ವೇಷವನ್ನು ಬಿಚ್ಚಿ) ನಾನೇ, ಈತನು ನಿತ್ಯವೂ ಆರಾಧಿಸುತ್ತಿರುವ ಶ್ರೀರಾಮಚಂದ್ರನು. ಇವನನ್ನು ಪರೀಕ್ಷಿಸಲು ಈರೀತಿ ವೃದ್ಧಬ್ರಾಹ್ಮಣನಾಕಾರದಿಂದ ಬಂದು ವಸ್ತ್ರವನ್ನು ತೆಗೆದುಕೊಂಡೆನು. ಈತನು ಮಹಾಪುಣ್ಯಶಾಲಿಯು, ಈ ವಸ್ತ್ರವು ನನಗೇತಕ್ಕೆ! ಇದನ್ನು ಈತನ ಮನೆಗೇ ಸೇರಿಸುವೆನು. (ಎಸೆದು ಹೋಗುವನು.)

**ದೃಶ್ಯ ೬. (ಬೀದಿಯಲ್ಲಿ ರತ್ನಾಕರನ ಮನೆಯ ಮುಂದೆ ಕಬೀರ ದಾಸನ ಪತ್ನಿಯು ನೀರಿನ ಕೊಡವನ್ನು ಹೊತ್ತು ಕೊಂಡು ಪ್ರವೇಶಿಸುವಳು.)**

**ಬೀಬಿ**—ಗಂಗಾಸ್ನಾನಘಟ್ಟದಿಂದ ಮನೆಗೆ ಬಹಳದೂರ, ಬಿಸಿಲೇರಿತು, ಮೂರು ಉಪವಾಸಗಳನ್ನು ಮಾಡಿರುವ ನನಗೆ ನಡೆಯಲು ತ್ರಾಣವೇ ಇಲ್ಲ. ಆಯಾಸವಾದರೋ ವಿಪರೀತವಾಗಿರುವುದು! ಇನ್ನೂ ಮನೆಯು ಬಹು ದೂರದಲ್ಲಿರುವುದು. (ಪಕ್ಕದಲ್ಲಿ ನೋಡಿ) ಓಹೋ! ಈ ಪಕ್ಕದಲ್ಲಿರುವ ಜಗುಲಿಯು ಪ್ರಶಸ್ತವಾಗಿರುವುದು. ಅಲ್ಲಿ ಸ್ವಲ್ಪಹೊತ್ತು ಕುಳಿತಿದ್ದು ಹೋಗುವೆನು. (ಕೊಡವನ್ನಿಳಿಸಿ ಕುಳಿತುಕೊಳ್ಳುವಳು.)
(ರತ್ನಾಕರನ ಮನೆಯ ಬಾಗಿಲಲ್ಲಿ ಲಿಂಗನು ನಿಂತಿರುವನು.)

**ಲಿಂಗ**—ಲೋಕದಲ್ಲಿ ಸತ್ಕಾರ್ಯಗಳಿಗೆ ವಿಘ್ನಗಳೂ, ದುಷ್ಕಾರ್ಯಗಳಿಗೆ ಸೌಕರ್ಯಗಳೂ ಒದಗುವುದೇ ಸ್ವಭಾವವು. ಆ ಕಬೀರದಾಸನ ಪತ್ನಿಯಲ್ಲಿ ಮನವಿಟ್ಟು ಆಕೆಗಾಗಿ, ಆ ಅವಿವೇಕಿ ಕಾಕೋದರನು ಕೇಳಿದಷ್ಟು ಹಣವನ್ನು ಕೊಟ್ಟು, ಸದಾ ಆಕೆಯನ್ನೇ ಸ್ಮರಿಸುತ್ತ ನಮ್ಮ ರತ್ನಾಕರನು ಹುಚ್ಚನಂತೆ ಆಗಿರುವನು. ಕಾಕೋದರನು ತನ್ನ ದುಷ್ಟತನದಿಂದ ಇತರರನ್ನೂ ಕೆಡಿಸಿ ಕಡೆಗೆ ತಾನೂ ಕೆಡುವನು ಆಕೆಯು ಈ ಮಾರ್ಗವಾಗಿ ಬರುವಳೆಂದು ಒಳಗಿನಿಂದ ಅವರು ಹೊಂಚುಕಾಯುತ್ತಿರುವುದಕ್ಕೆ ಸರಿಯಾಗಿ ಈಕೆಯು ಇಲ್ಲಿಗೆ ಬಂದುದಲ್ಲದೆ ಈ ಜಗುಲಿಯ ಮೇಲೆಯೇ ಕುಳಿತೂ ಬಿಟ್ಟಳು. ಇನ್ನು ಆ ಮೂರ್ಖನು ಬಂದು ಆಕೆಯನ್ನು ಮಾತನಾಡಿಸಬಹುದು. ಏನೇನು ವಿಚಿತ್ರಗಳು ನಡೆಯುವುವೋ ಕಾಣೆನು

**ಕಾಕೋದರ**—(ಪ್ರವೇಶಿಸಿ ಸೇವಕನನ್ನು ನೋಡಿ) ಎಲವೋ! ನಿನ್ನೊಡನೆ ನಾನೇನನ್ನು ಹೇಳಿದ್ದೆನೋ?

**ಲಿಂಗ**—ಎಷ್ಟೋ ವಿಷಯಗಳನ್ನು ಹೇಳಿದ್ದಿರಿ ಸ್ವಾಮಿ! ನಾನೊಂದನ್ನೂ ಬರೆದಿಟ್ಟುಕೊಳ್ಳಲಿಲ್ಲ.

**ಕಾಕೋದರ**—ಛೀ! ಅವಿವೇಕಿ! ನಾನು ಗಂಗಾಸ್ನಾನಘಟ್ಟದ ಬಳಿಯಲ್ಲಿ ರತ್ನಾಕರನೊಡನೆ ಹೇಳಿದ್ದ ವಿಷಯವನ್ನು ನೀನು ಕೇಳಲಿಲ್ಲವೇ?

**ಲಿಂಗ**—ಓಹೋ! ಅದನ್ನೋ? ಕೇಳಿದ್ದೆನು ಕೇಳಿದ್ದೆನು, ಸೋಮಾರಿಗಳು ಜೀವನಕ್ಕೆಂದು ವಿಧವಿಧವಾದ ನೆಪಗಳನ್ನು ಕಲ್ಪಿಸಿ ಪರರಿಂದ ಹಣವನ್ನು ಸೆಳೆಯುವರೆಂದು ಹೇಳಿದ್ದಿರಿ.

**ಕಾಕೋದರ**—(ಆತ್ಮ) ನಾನು ದಾಸರ ವಿಷಯದಲ್ಲಿ ಹೇಳಿದ್ದ ಮಾತನ್ನು ನನಗೇ ಅನ್ವಯಿಸಿ ಮಾತನಾಡುತ್ತಿರುವನು! (ಪ್ರಕಾಶ) ಎಲವೋ! ದುಷ್ಟಾ! ಅದನ್ನು ನಾನು ಕೇಳಲಿಲ್ಲ. ಈ ತಲೆಬಾಗಿಲಲ್ಲಿ ನೀನು ನನ್ನೊಡನೆ ಎಷ್ಟು ಮಾತುಗಳನ್ನೋ ಆಡುವುದು?

**ಲಿಂಗ**—ಸ್ವಾಮಿ! ತಲೆಗೆ ಬಾಗಿಲಿರುವುದರಿಂದಲೇ ಮಾತನಾಡುವುದು. ಇಲ್ಲದಿದ್ದರೆ ತಾವೂ ಮಾತನಾಡಲಾರಿರಿ, ನಾನೂ ಆಡಲಾರೆ.

**ಕಾಕೋದರ**—ಛೀ! ಅಯೋಗ್ಯ! ನಿನ್ನ ಹರಟೆಗಳು ಬಲವಾದುವು. ನಿನ್ನೊಡನೆ ಪ್ರಸಂಗ ಮಾಡುತ್ತಿದ್ದರೆ ಕಾರ್ಯವು ಕೆಡುವುದೇನೋ ನಿಜ.

**ಲಿಂಗ**—(ಆತ್ಮ) ಕೆಡುಕಿನ ಕಾರ್ಯವಾದುದರಿಂದ ಕೆಡಲೇಬೇಕು. (ಪ್ರಕಾಶ) ಸ್ವಾಮಿಾ! ತಾವು ಮಹಾನುಭಾವರು, ಲೋಕೋಪಕಾರಿಗಳು, ಸತ್ಯವಂತರು, ಧರ್ಮಶೀಲರು, ಆದರಿಂದ ಇಂತಹ ಕಾರ್ಯಗಳಿಗೆ ಪ್ರಯತ್ನಿಸುವಿರಿ.

**ಕಾಕೋದರ**—ಎಲವೋ! ಹೆಚ್ಚಾಗಿ ಹರಟಬೇಡ ಸಾಕು. (ಜಗುಲಿಯ ಮೇಲೆ ಕುಳಿತಿರುವ ಬೀಬಿಯನ್ನು ನೋಡಿ) ಆಕೆ ಆಗಲೇ ಬಂದೇ ಇರುವಳು. ಈ ನೀಚನು ನನಗೆ ಹೇಳಲೇ ಇಲ್ಲವಲ್ಲಾ! (ಪ್ರಕಾಶ) ಎಲವೋ! ಈಕೆ ಈ ಮಾರ್ಗವಾಗಿ ಬರುವಳೇನೋ ನೋಡುತ್ತಿರೆಂದು ನಾನು ನಿನಗೆ ಹೇಳಿರಲಿಲ್ಲವೇನೋ?

**ಲಿಂಗ**—ಹೇಳಿದ್ದಿರಿ; ಆದಕ್ಕಾಗಿಯೇ ನೋಡುತ್ತಲೇ ಇದ್ದೆನು. ಆಕೆ ಬಂದುದನ್ನೂ ನೋಡಿದೆನು. ಕುಳಿತುಕೊಂಡುದನ್ನೂ ನೋಡಿದೆನು. ಒಂದು ರೆಪ್ಪೆಯನ್ನಾದರೂ ಅಳ್ಳಾಡಿಸಲಿಲ್ಲ.

**ಕಾಕೋದರ**—ಛಿ! ಅವಿವೇಕಿ! ಅದನ್ನು ನನ್ನ ಸಂಗಡ ಹೇಳಬೇಡವೇ?

**ಲಿಂಗ**—ತಾವು ನನಗೆ ಹಾಗೆ ಹೇಳಿದ್ದಿರಾ?

**ಕಾಕೋದರ**—ನೀನು ಅವಿಧೇಯನು. ನಿನ್ನಿಂದಲೇ ನಿನ್ನ ಸ್ವಾಮಿಯ ಕಾರ್ಯವು ಕೆಡುವುದು.

**ಲಿಂಗ**—ನನ್ನಿಂದ ಸ್ವಾಮಿಕಾರ್ಯವು ಕೆಡುವುದು, ನಿಮ್ಮಿಂದ ಆತನ ಕೆಲಸವೇ ಪೂರಯಿಸುವುದು

**ಕಾಕೋದರ**—(ಆತ್ಮಗತ) ಇವನೊಡನೆ ಮಾತನಾಡಿದರೆ ಫಲವಿಲ್ಲ. ಮೊದಲು ಹೋಗಿ ಆ ರಮಣಿಯನ್ನು ಮಾತನಾಡಿಸುವೆನು

**ಲಿಂಗ**—ಸ್ವಾಮಿಾ! ಬೇಡಿ ಬೇಡಿ, ಆಕೆಯ ತಂಟೆಗೆ ಹೋಗಬೇಡಿ, ನಿಮಗೆ ಈ ಕಾರ್ಯ ಬೇಡಿ, ಆಕೆಯನ್ನು ಕೆಣಕಿ ನೀವು ಅವಮಾನಪಡಬೇಡಿ.

**ಕಾಕೋದರ**—ಛೀ! ಅವಿವೇಕಿ! ಸ್ವಾಮಿದ್ರೋಹಿ! ನಿನ್ನಿಂದ ಯಾವಾಗಲೂ, ಆಗುವ ಕಾರ್ಯಕ್ಕೆ ಅಪಾಯ, ಆಗದ ಕಾರ್ಯಕ್ಕೆ ಸಹಾಯ. ಮಾತನಾಡದೆ ಸುಮ್ಮನಿರು.

ಲಿಂಗ—(ಆತ್ಮಗತ) ಮದ್ಯವನ್ನು ಕುಡಿಯುವರು ಬೇಡವೆಂದರೆ ಬಿಟ್ಟಾರೆ! ಅನುಭವಿಸಲಿ, ನನಗೇನು !

ಕಾಕೋದರ—(ಬಳಿಗೆ ಬಂದು) ತಾಯಿ ನೀವು ಯಾರಮ್ಮಾ? ಇಲ್ಲಿ ಏತಕ್ಕೆ ಕುಳಿತುಕೊಂಡಿರುವಿರಿ ?

ಬೀಬಿ— ಅಯ್ಯಾ! ನಾನೊಬ್ಬ ಬಡವಳು, ಗಂಗಾಸ್ನಾನ ಘಟ್ಟದಿಂದ ಬರುತ್ತಿದ್ದೆನು. ಆಯಾಸವಾಯಿತು, ಸ್ವಲ್ಪ ವಿಶ್ರಮಿಸಿಕೊಳ್ಳಲು ಇಲ್ಲಿ ಕುಳಿತೆನು.

ರತ್ನಾಕರ—(ಪ್ರವೇಶಿಸಿ ನೋಡಿ) ಓಹೋ! ಆಗಲೇ ಪ್ರಸಂಗವನ್ನಾರಂಭಿಸಿರುವನು !

ಕಾಕೋದರ—(ಬೀಬಿಯನ್ನು ನೋಡಿ) ತಾಯಿ! ನೀವು ಬಹಳ ಬಡವರೆಂದು ಹೇಳಿದಿರಲ್ಲವೆ? ಐಶ್ವರ್ಯವಿಲ್ಲದ ನಿಮ್ಮ ಸ್ಥಿತಿಯು ಬಹಳ ಕಷ್ಟವಲ್ಲವೇ ?

ಬೀಬಿ—ನಮ್ಮಂಥವರಿಗೆ ಐಶ್ವರ್ಯವೇತಕ್ಕೆ ?

ಕಾಕೋದರ—ಅಯ್ಯೋ! ಹಾಗೆಂದರೇನಮ್ಮಾ? ಐಶ್ವರ್ಯವೇ ಸಕಲ ಸುಖಕ್ಕೂ ಮೂಲವಲ್ಲವೆ ?

ಬೀಬಿ—ಐಶ್ವರ್ಯದಿಂದೇನು ಸುಖವಾಗುವುದು?

ಕಾಕೋದರ—ಅಯ್ಯೋ! ಇದೇನಮ್ಮಾ! ಹೀಗೆ ಹೇಳುವಿರಿ? ಪ್ರಪಂಚ ವ್ಯಾಪಾರವೆಲ್ಲವೂ ಐಶ್ವರ್ಯದ ಮಹಿಮೆಯಿಂದಲೇ ಅಲ್ಲವೇ ನಡೆಯುತ್ತಿರುವುದು ?

ಬೀಬಿ—ನಾನು ಹಾಗೆ ತಿಳಿದಿಲ್ಲ. ಸಕಲಪ್ರಪಂಚವ್ಯಾಪಾರಗಳೂ ಶ್ರೀರಾಮಚಂದ್ರನ ಮಹಿಮೆಯಿಂದ ನಡೆಯುತ್ತಿರುವುವೆಂದು ತಿಳಿದಿರುವೆನು.

ಕಾಕೋದರ—ಅಯ್ಯೋ! ಹುಚ್ಚುತನವೇ! ಇದೇನಮ್ಮಾ! ಆ ನಿಮ್ಮ ಗಂಡನಿಗೆ ಹಿಡಿದ ಹುಚ್ಚೇ ನಿಮಗೂ ಹಿಡಿದಿರುವಂತೆ ಕಾಣುವುದು.

ಬೀಬಿ—ಅಪ್ಪಾ! ಲೋಕದಲ್ಲಿ ಇಂತಹ ಗಂಡನ ಹುಚ್ಚು ಹೆಂಡಿತಿಗೂ ಹಿಡಿಯಬೇಕಾದುದೇ ಧರ್ಮವಲ್ಲವೇ ?

**ಕಾಕೋದರ**— ಒಳ್ಳೆಯ ಧರ್ಮ! ಒಳ್ಳೆಯ ಧರ್ಮ! ಐಶ್ವರ್ಯವಿಲ್ಲದಿದ್ದರೆ ಲೋಕದಲ್ಲಿ ಸುಖವೆಲ್ಲಿಯದು ? ಸಂತೋಷವೆಲ್ಲಿಯದು ? ಸೌಭಾಗ್ಯ ವೆಲ್ಲಿಯದು ? ವಿನೋದವೆಲ್ಲಿಯದು ?

**ಬೀಬಿ**—ಅಯ್ಯಾ! ಐಶ್ವರ್ಯವಿದ್ದಲ್ಲಿ ಸುಖವೂ ಇಲ್ಲ, ಸಂತೋಷವೂ ಇಲ್ಲ. ಸುಮ್ಮನೆ ಐಶ್ವರ್ಯವನ್ನೇತಕ್ಕೆ ಹೊಗಳುವಿರಿ ?

**ಕಾಕೋದರ** — (ಆತ್ಮ) ಅಯ್ಯೋ ! ಅವಿವೇಕವೇ ! ಇದಕ್ಕೇನೆಂದು ಹೇಳೋಣ ? ಲೋಕದಲ್ಲ ಮನುಷ್ಯರಿಗೆ ಗೌರವವನ್ನು ಕೊಡುವುದು ಯಾವುದಮ್ಮಾ ? ಐಶ್ವರ್ಯ! ಕಾಲಕಾಲಕ್ಕೆ ರುಚಿಕರಗಳಾದ ಆಹಾರ ವಸ್ತುಗಳನ್ನು ಒದಗಿಸಿಕೊಡುವುದು ಯಾವುದಮ್ಮಾ? ಐಶ್ವರ್ಯ ! ಬಯಸಿದ ವಸ್ತ್ರಾಭರಣಗಳನ್ನೂ ಇತರ ಪ್ರಿಯವಸ್ತುಗಳನ್ನೂ ಒದಗಿಸಿ ಕೊಡಬಲ್ಲುದು ಯಾವುದು ? ಐಶ್ವರ್ಯ ! ಕೋಟಿದೋಷಗಳಿದ್ದರೂ ನಿರ್ದೋಷಿಯೆಂದು ಮನುಷ್ಯನನ್ನು ಹೊಗಳಿಸುವುದು ಯಾವುದು ? ಐಶ್ವರ್ಯ ! ಕೀರ್ತಿಯನ್ನು ಕೊಡುವುದು ಯಾವುದು ? ಐಶ್ವರ್ಯ ! ಸಮಯದಲ್ಲಿ ಮಾನ ಪ್ರಾಣಗಳನ್ನು ಕಾಪಾಡುವುದು ಯಾವುದು ? ಐಶ್ವರ್ಯ ! ಧರ್ಮಭ್ರಷ್ಟರಾಗಲಿ, ಕರ್ಮಭ್ರಷ್ಟರಾಗಲಿ ಜಾತಿಭ್ರಷ್ಟರಾಗಲಿ ಅಂಥವರನ್ನು ಸಹ ಮಹಾಗೌರವಶಾಲಿಗಳೆಂದು ಹೇಳಿಸುವುದು ಯಾವುದು ? ಐಶ್ವರ್ಯ ? ಬೇಕುಬೇಕಾದಂತಹ ಸ್ವರ್ಗಸುಖಗಳನ್ನು ಕೊಡುವುದು ಯಾವುದು ? ಐಶ್ವರ್ಯ ! ಇನ್ನೂ ಐಶ್ವರ್ಯದ ಮಹಿಮೆಗಳನ್ನು ಎಷ್ಟು ಹೇಳಿದರೂ ಪಾರವಿಲ್ಲದೇ ಇದೆ. ಹೀಗಿರುವಲ್ಲಿ ಐಶ್ವರ್ಯದಿಂದ ಸುಖವಿಲ್ಲವಂತೆ ! ಸಂತೋಷವಿಲ್ಲವಂತೆ ! ಅಯ್ಯೊ ! ನಿಮ್ಮ ಹುಚ್ಚುತನಕ್ಕೆ ನಾನೇನೆಂದು ಹೇಳಲಿ !

**ಬೀಬಿ**—ನಿಜ ! ಈ ಭಾಗದಲ್ಲಿ ನಾದು ಹುಚ್ಚಳೇ ಸರಿ. ಬಡವರು ಉಂಡು ಉಡುವುದಕ್ಕೆ ಹೇಗೋಹಾಗೆ ಒದಗಿಸಿಕೊಂಡು ಸತ್ಕಾರ್ಯಗಳಲ್ಲಿ ಕಾಲವನ್ನು ನೂಕಿಕೊಂಡು ಪರಮಾತ್ಮನ ಪಾದಧ್ಯಾನಾಮೃತವನ್ನು ಪಾನಮಾಡುತ್ತ ಆನಂದದಿಂದಿರುವರು. ಈ ಹಾಳು ಐಶ್ವರ್ಯ ವೊಂದಿರುವುದಾದರೆ ದೈವಧ್ಯಾನವೂ, ಸುಜನರಲ್ಲಿ ಪ್ರೀತಿಯೂ, ಭೂತ ದಯೆಯೂ, ಧರ್ಮ ನೀತಿಮಾರ್ಗಗಳೂ, ಪಾರಮಾರ್ಥಿಕವಿಚಾರಗಳೂ, ಜ್ಞಾನಾರ್ಜನೆಯ ಗಮನವೂ, ಸಂಪೂರ್ಣವಾಗಿ ಮರೆತೇ ಹೋಗು

ವುದೇ ರೂಢಿಯು. ಅಥವಾ ಅವುಗಳು ಮನಸ್ಸಿನಲ್ಲಿ ಹುಟ್ಟಲು ಆ ಐಶ್ವರ್ಯವು ಅವಕಾಶವನ್ನೇ ಕೊಡುವುದಿಲ್ಲ. ಚಿತ್ತಸ್ಥೈರ್ಯ, ಸದಾಲೋಚನೆ, ಸರ್ವತ್ರಸಮದೃಷ್ಟಿ, ಶಾಂತತೆ, ಸ್ಮರಣೆ, ಸಾಧುವೃತ್ತಿ, ಸುಜನಭಕ್ತಿ, ಕರ್ಮಶ್ರದ್ಧೆ, ಮೊದಲಾದುವು ಮನುಷ್ಯನಲ್ಲಿ ವೃದ್ಧಿಯಾಗಲವಕಾಶವಾಗಲಾರದು. ಅಥವಾ ಇವುಗಳು ಇದ್ದರೂ ಆ ಐಶ್ವರ್ಯವೆಂಬ ,ಬೆಂಕಿಯು ಇವುಗಳ ಮೂಲವನ್ನೇ ಉರಿಸಿಬಿಡ್ತುವುದು. ಅಲ್ಲದೆ ಇಹಲೋಕದಲ್ಲಿ ಮಹಾಚಿಂತೆಯನ್ನೂ, ಪ್ರತಿಕ್ಷಣದಲ್ಲಿಯೂ ಭೀತಿಯನ್ನೂ ಉಂಟುಮಾಡಿ ಮನುಷ್ಯನನ್ನು ಹುಚ್ಚನನ್ನಾಗಿ ಮಾಡಿ ದೇವರ ದೃಷ್ಟಿಗೆ ದೂರದೂರವಾಗಿ ಕರೆದುಕೊಂಡು ಹೋಗುತ್ತಿರುವುದು. ಅಲ್ಲದೆ ಐಶ್ವರ್ಯವಂತರಿಗೆ ಕಣ್ಣಿದ್ದರೂ ಕಾಣಿಸುವುದಿಲ್ಲ, ಕಿವಿಯಿದ್ದರೂ ಕೇಳಿಸುವುದಿಲ್ಲ, ನಾಲಗೆಯಿದ್ದರೂ ಅವರು ಮಾತನಾಡುವುದಿಲ್ಲ. ಆದುದರಿಂದ ಐಶ್ವರ್ಯದಲ್ಲಿರುವ ಅನಾನುಕೂಲ್ಯಗಳೂ, ಕಷ್ಟಗಳೂ, ಅಷ್ಟಿಷ್ಟೆಂದು ಹೇಳಲಾಗದು. ಆದಕಾರಣ ಅದನ್ನು ಶ್ಲಾಘಿಸುವ ನಿಮ್ಮಂಥವರು ಹುಚ್ಚರಲ್ಲದೆ ನಾವೆಂದಿಗೂ ಹುಚ್ಚರಲ್ಲ.

ಲಿಂ:—ಸರಿ! ಸತ್ಯವಂತರ ಮಾತೇಮಾತು!

ಕಾಕೋದರ—(ನಕ್ಕು) ನಿಜ! ನಿಜ! ಇದು ಎಟಕದ ದ್ರಾಕ್ಷಿಯ ಹಣ್ಣನ್ನು ಹುಳಿಯೆಂದು ಹೀಯಾಳಿಸಿ ಹೋದ ನರಿಯ ಕಥೆಯಾಯಿತು. ಹೀಗೆ ಅಭಾವದಿಂದ ವಿರಕ್ತಿಯನ್ನು ನಟಿಸುತ್ತಿರುವುದು ನಿಮ್ಮಂಥವರ ಸ್ವಭಾವ. ಆದರೆ ಕೋಪಿಸಬೇಡಿ! ನಾನು ಇಷ್ಟುದೂರ ಮಾತನಾಡಿದುದಕ್ಕೆ ಕಾರಣವೇನೆಂದರೆ! ನನಗೆ ನಿಮ್ಮನ್ನು ನೋಡಿ ಬಹಳ ಕನಿಕರವುಂಟಾಯಿತು. ನಿಮ್ಮ ಲಾವಣ್ಯವನ್ನು ನೋಡಿದರೆ ಗಂಧರ್ವಾಂಗನೆಯರೂ ನಾಚುವರು. ಹೀಗಿರುವಲ್ಲಿ ಈ ರೂಪಿಗೆ ತಕ್ಕ ವಸ್ತ್ರಾಭರಣಗಳಿಲ್ಲದೆಯೂ ತಿನ್ನುವುದಕ್ಕೆ ತಕ್ಕ ಆಹಾರಕ್ಕೆ ಮಾರ್ಗವಿಲ್ಲದೆಯೂ, ನಿತ್ಯ ಕಷ್ಟಕ್ಕೊಳಗಾಗಿ ಆ ಹುಚ್ಚುಫಕೀರನಾದ ಕುರೂಪಿ ಕಬೀರದಾಸನೊಡನೆ ಹೆಣಗುತ್ತಿರುವುದು ನಿಮಗೆ ತಕ್ಕುದೆ? ಇದೆಲ್ಲಕ್ಕೂ ನಿಮಗೆ ಐಶ್ವರ್ಯವಿಲ್ಲದಿರುವುದೇ ಮೂಲಕಾರಣವಲ್ಲವೇ? ಆದರಿಂದ ಈ ಒಣ ವೈರಾಗ್ಯವನ್ನು ಬಿಟ್ಟು ಸರಸಭಾವದಿಂದ ನವಯೌವನ ರೂಪಸಂಪನ್ನನೂ ರತ್ನಾಕರನಂತೆ ರತ್ನಾಕರನೂ ಆದ ನಮ್ಮ ರತ್ನಾಕರನನ್ನು

ಸೇರಿ ನಿತ್ಯಸೌಭಾಗ್ಯಾನಂದವನ್ನು ಹೊಂದಿ, ಈ ಹಾಳು ಕೆಲಸಕ್ಕೆ ಬಾರದ ತುಲಸೀಮಣಿಮಾಲೆಗಳಿಗೆ ಪ್ರತಿಯಾಗಿ ನವರತ್ನ ಮುಕ್ತಾ ಮಾಲೆಗಳನ್ನೂ, ಕಣ್ಣಿಗೆ ಬೇಕಾದ ಒಡವೆಗಳನ್ನೂ, ಈ ಹರುಕು ಬಟ್ಟೆ ಗಳಿಗೆ ಪ್ರತಿಯಾಗಿ ದಿವ್ಯದುಕೂಲಗಳನ್ನೂ ಧರಿಸಿ ಸುಖವಾಗಿರಿ.

**ಬೀಬಿ**—(ಕಾಕೋದರನ ಮಾತು ಮುಗಿಯುವುದರೊಳಗೆ ಅಸಹ್ಯದಿಂದ ಕಿವಿ ಗಳನ್ನು ಮುಚ್ಚಿ (ಆತ್ಮ) ರಾಮ! ರಾಮ! ನಾನೀ ಅಯೋಗ್ಯನ ದುರ್ವಾಕ್ಯಗಳನ್ನು ಕೇಳಲಾರನು! ಛೀ! ದುರಾತ್ಮ! ಅಯೋಗ್ಯ ನಾದ ನಿನ್ನೊಡನೆ ಮಾತನಾಡಿದ್ದೇ ಅನುಚಿತವು! ಆ ನಿನ್ನ ವಸ್ತ್ರಾಭರ ಣಗಳನ್ನು ಕತ್ತೆ ನಾಯಿಗಳಿಗಲಂಕರಿಸಿ ನೀನೂ ನಿನ್ನ ಆ ನೀಚ ಸ್ನೇಹಿತನೂ ಅವುಗಳೊಡನೆ ಆಹಾರ ವಿಹಾರಮಾಡಿ ಆನಂದಪಡಿ.

(ಹೊರಟುಹೋಗುವಳು.)

**ಕಾಕೋ**— (ತಲೆಯನ್ನು ತಗ್ಗಿಸಿ ಬೀಬಿ ಅಲ್ಲಿಯೇ ಇರುವಳೆಂದೆಣಿಸಿ) ತಾಯಿ! ಕೋಪಿಸಬೇಡಿ! ನೀವು ಬಡವರೆಂದು ಹೇಳಿದ್ದರಿಂದ ನನಗೆ ಕನಿಕರವುಂಟಾಯಿತು. ಈ ಶರೀರವು ಹುಟ್ಟಿದುದಕ್ಕೆ ಪರೋಪಕಾರ ಮಾಡುವುದೇ ಸಾರ್ಥಕವೆಂದು ಹಿರಿಯರು ಹೇಳಿರುವುದರಿಂದ ನಿಮಗೆ ನಮ್ಮ ರತ್ನಾಕರನಿಂದ ಸ್ವಲ್ಪ ಸಹಾಯಮಾಡಿಸೋಣವೆಂದು ಹಾಗೆ ಹೇಳಿದೆನು, ಅಷ್ಟೆ! ನಾನು ಹೇಳುವುದರಲ್ಲಿ ಗುಣವನ್ನು ಗ್ರಹಿಸಿ ಆಲೋಚಿಸದೆ ಮಾತನಾಡಬೇಡಿ! ತಿಳಿಯಿತೇ? (ಪಕ್ಕಕ್ಕೆ ತಿರುಗಿ ಬೀಬಿ ಇಲ್ಲದಿರುವುದನ್ನು ಕಂಡು ಲಜ್ಜಾವಮಾನಗಳಿಂದ) ಅಯ್ಯೋ! ಆಕೆ ಹೊರಟೇಹೋಗಿರುವಳು!

**ಲಿಂಗ**—(ಗಟ್ಟಿಯಾಗಿ ನಕ್ಕು) ಸ್ವಾಮಿ! ಬೇಡಿ! ಬೇಡಿ! ಎಂದು ನಾನು ಮೊದಲೇ ಹೇಳಲಿಲ್ಲವೇ? ನೋಡಿ, ಗಂಟಲೊಣಗುವಂತೆ ಮಾತ ನಾಡಿ, ದೊಡ್ಡ ಮನುಷ್ಯರೆನ್ನಿಸಿಕೊಳ್ಳುವುದಕ್ಕೆ ಹೋಗಿ, ಸಣ್ಣ ಮನು ಷ್ಯರಾದುದೇ ಫಲ.

**ಕಾಕೋದರ**—ಅಹುದೋ! ಅಯೋಗ್ಯಾ! ಮೊದಲೇ ನೀನು ಹಲ್ಲಿ ನುಡಿ ದಂತೆ ನುಡಿದೆ. ಅದರಿಂದಲೇ ಹೀಗಾಯಿತು.

**ಲಿಂಗ**—ಸ್ವಾಮಿ! ನಾನು ಹಲ್ಲಿ ನುಡಿದಂತೆ ನುಡಿಯಲಿಲ್ಲ, ನೀವು ಹಲ್ಲು ಹಿಡಿಯದೆ ನುಡಿದಿರಿ! ಅದರಿಂದಲೇ ಹೀಗಾಯಿತು!

**ಕಾಕೋದರ**— (ಬೀಬಿ ಹೋಗುವ ಮಾರ್ಗವನ್ನೇ ನೋಡುತ್ತಿರುವನು.)

**ಲಿಂಗ**—ಇನ್ನೇತಕ್ಕೆ ಸ್ವಾಮಿಾ! ಚಪಲ! ಆಕೆ ಹೊರಟುಹೋಗಿ ಎಷ್ಟೋ ಹೊತ್ತಾಯಿತು.

**ರತ್ನಾಕರ**—(ಮುಂದೆ ಬಂದು) ಕಾಕೋದರಾ! ನೀನು ಏನನ್ನೋ ಮಾಡುವುದಕ್ಕೆ ಹೋಗಿ ಏನನ್ನೋ ಮಾಡಿಬಿಟ್ಟೆ!

**ಲಿಂಗ**—ಸ್ವಾಮಿಾ! ಇವರು ಯಾವಾಗಲೂ ಹೀಗೆಯೇ! ಗಣೇಶನನ್ನು ಮಾಡುವುದಕ್ಕೆ ಹೋಗಿ ಅಪರಪ್ಪನನ್ನು ಮಾಡುವುದು, ರಾಮನನ್ನು ಮಾಡುವುದಕ್ಕೆ ಹೋಗಿ ರಾಮನ ದೂತನನ್ನು ಮಾಡಿಬಿಡುವುದು, ಔಪಾಸನವನ್ನು ಮಾಡಹೋಗಿ ಗಡ್ಡವನ್ನು ಸುಟ್ಟುಕೊಳ್ಳುವುದು, ಇದೇ ಇವರ ಚಾತುರ್ಯ!

**ಕಾಕೋದರ**—ಛೀ! ಛೀ! ಸಾಕು ನಿನ್ನ ಅವಿವೇಕದ ಹರಟೆ.

**ಲಿಂಗ**—ಅಹುದು ಸ್ವಾಮಿಾ! ಹರಟೆಯಿಂದಲೇ ಅವಿವೇಕವಾದುದು!

**ರತ್ನಾಕರ**—ಕಾಕೋದರ! ಆಕೆಯನ್ನು ನೀನು ಕೆರಳಿಸಿದೆ, ನಯದಿಂದ ಕಾರ್ಯವನ್ನು ಸಾಧಿಸಬೇಕಾಗಿತ್ತು.

**ಕಾಕೋದರ**—ಇನ್ನೆಷ್ಟು ನಯವಯ್ಯಾ! ಅವಳು ಬಲುಸಿಡುಕಿ; ನುಡಿದರೆ ಸಿಡಿದುಬೀಳುವಳು.

**ಲಿಂಗ**—ನಿಮ್ಮ ನುಡಿಯಂಥಾದ್ದು.

**ಕಾಕೋದರ**—ಛೀ! ಭ್ರಷ್ಟಾ! ನಿನಗೆ ಸ್ವಲ್ಪವೂ ಭಯವೇ ಇಲ್ಲವಲ್ಲಾ!

**ಲಿಂಗ**—ನಿಮಗೆ ನಯವಿಲ್ಲ, ನನಗೆ ಭಯವಿಲ್ಲ.

**ರತ್ನಾಕರ**—ಮಿತ್ರಾ! ಬಿಡು. ಅವನೊಡನೆ ಮಾತೇನು? ಇನ್ನು ಮುಂದೆ, ಮಾಡಬೇಕಾದೇನು?

**ಲಿಂಗ**—(ಆತ್ಮಗತ) ಶಂಖವಾದ್ಯವೇ, ಇನ್ನೇನು!

**ರತ್ನಾಕರ**—ನಿನ್ನ ಮಾತನ್ನು ಕೇಳಿ ಸಾವಿರಾರು ವರಹಗಳ ಬೆಲೆಯನ್ನು ಕೊಟ್ಟು ವಸ್ತ್ರಾಭರಣಗಳನ್ನು ತರಿಸಿದ್ದು ವ್ಯರ್ಥವಾಯಿತೇ!

**ಕಾಕೋದರ**—ವ್ಯರ್ಥವೇತಕ್ಕಾಗುವುದಯ್ಯಾ? ನಾನು ಬೇರೆ ಪ್ರಯತ್ನವನ್ನು ಮಾಡಿ ಕಾರ್ಯವನ್ನು ಸಾಧಿಸಿಯೇ ಬಿಡುತ್ತೇನೆ ನೀನು ಆ ಚಿಂತೆಯನ್ನೇ ಬಿಡು.

**ಲಿಂಗ**—(ಆತ್ಮ) ಬಿಟ್ಟಂತೆಯೇ !

**ಕಾಕೋದರ**—ಆದರೆ ಈಗ ತಂದಿರುವ ವಸ್ತ್ರಾಭರಣಗಳಿಗೆ ಪೂರ್ತಿಯಾಗಿ ಹಣವನ್ನಿನ್ನೂ ಕೊಟ್ಟಿಲ್ಲ, ನಾನು ತೆಗೆದುಕೊಂಡ ನಾಲ್ಕು ನೂರು ವರಹಗಳನ್ನು ಮಾತ್ರ ಕೊಟ್ಟು ಬಂದಿರುವೆನು. ಇನ್ನೂ ಎರಡು ನೂರು ವರಹಗಳನ್ನು ಅವಶ್ಯಾಗಿ ಕೊಡಬೇಕಾಗಿದೆ, ಏತಕ್ಕೆಂದರೆ. ಈಗ ಚಿನ್ನ ಬೆಳ್ಳಿ, ರತ್ನಗಳ ಬೆಲೆಯು ಹೆಚ್ಚಿರುವುದು.

**ಲಿಂಗ**—(ಆತ್ಮಗತ) ನಿಜ, ನಿಜ ! ನಿನಗೆ ಆಸೆ ಹೆಚ್ಚಿದ ಹಾಗೆಲ್ಲ ಬೆಲೆಯೂ ಹೆಚ್ಚುವುದು. ಗಂಟನ್ನು ಹೊಡೆಯಲು ಒಳ್ಳೆಯ ಉಪಾಯ !

**ರತ್ನಾಕರ**—ಕಾಕೋದರ! ಹಾಗಾದರೆ ಇನ್ನೂ ಎರಡು ನೂರು ವರಹಗಳನ್ನು ತೆಗೆದುಕೊಂಡು ಹೋಗು, ನಿನಗೆ ಅಡ್ಡಿಯುಂಟೇನು ?

**ಲಿಂಗ**—(ಆತ್ಮಗತ) ಸರಿ ! ಸರಿ ! ಅವನು ಭಂಗಿಯನ್ನಿಡುವುದಕ್ಕೂ ಇವನ ಹುಚ್ಚು ಏರುವುದಕ್ಕೂ ಪಾರವೇ ಇಲ್ಲ ; ಆಗಲಿ ! ಕಬೀರದಾಸನ ಪತ್ನಿಯನ್ನು ಬಯಸಿದುದಕ್ಕೆ ಕಡೆಗೆ ಭಿಕಾರಿದಾಸನಾಗವುದೇ ಪರಿಣಾಮ, ಆಗಲಿ. ಇವರಿಗೆ ಕೆಟ್ಟಮೇಲೆ ಬುದ್ಧಿ ಬರಬೇಕಲ್ಲದೆ ಯಾರು ಏನನ್ನು ಹೇಳಿದರೂ ಫಲವಿಲ್ಲ

**ಕಾಕೋದರ**—ಈಗ ನೀನು ಎರಡು ನೂರು ವರಹಗಳನ್ನು ಕೊಡುವುದು ಹೆಚ್ಚಲ್ಲ ಮುಖ್ಯವಾಗಿ ಈಕಾಲದಲ್ಲಿ ಮುಖವನ್ನು ನೋಡದೆ ಹಣವನ್ನು ವೆಚ್ಚಮಾಡಬೇಕು.

**ಲಿಂಗ**—(ಆತ್ಮ) ಅದನ್ನು ಬಿಟ್ಟರೆ ಬೇರೆಮಾತೇ ನಿನ್ನಲ್ಲಿಲ್ಲ !

**ರತ್ನಾಕರ**—ಕಾಕೋದರ ! ಬೇಕಾದಷ್ಟು ಹಣವನ್ನು ತೆಗೆದುಕೋ. ಆರು ನೂರಾಗಲಿ, ನೂರು ಆರಾಗಲಿ, ಆ ನಾರಿಯನ್ನು ಸಾಧಿಸಲೇಬೇಕು.

**ಕಾಕೋದರ**—ಭಲೇ ! ಹಾಗಿರಬೇಕು. ಬಾ ಹೋಗೋಣ, ಹಣವನ್ನು ಕೊಡು. (ಹೋಗುವರು.)

## ದೃಶ್ಯ ೭ ಬೀಬಿಯು ಮನೆಗೆ ಹೋಗುವ ಮಾರ್ಗ.

**ಬೀಬಿ**— ನಾನು ಎಂತಹ ಅಯೋಗ್ಯ ನೊಡನೆ ಮಾತನಾಡಿದೆನು ! ಅಯ್ಯೋ! ಪರಮಾತ್ಮನು ಇಂಥವಂಗೆ ಮನುಷ್ಯಜನ್ಮವನ್ನು ಕೊಟ್ಟುದು ಅನ್ಯಾಯ ಮಾಡಿದಂತಾಯಿತು. ಆತನು, ಈಗ ಇರುವ ಅಸಂಖ್ಯಾತಗಳಾದ ನರಕಗಳಲ್ಲದೆ ಇವೆಲ್ಲಕ್ಕಿಂತಲೂ ಘೋರವಾದ ಮತ್ತೊಂದು ಹೊಸ ನರಕವನ್ನು ಇವರಿಗಾಗಿ ಸೃಷ್ಟಿಸಬೇಕಾಗಿರುವುದು. ಸಭ್ಯನೆಂದು ಅವನೊಡನೆ ಮಾತನಾಡಿದುದೇ ಅನುಚಿತವು. ಕಾಮಾಂಧರಾಗಿ, ಐಶ್ವರ್ಯ ಮತ್ತರಾಗಿ ಮೋಹಪಿಶಾಚಗ್ರಸ್ತರಾದ ಇಂತಹ ಪಾಪಿಗಳ ಉಪಟಳ ದಿಂದಲ್ಲವೇ ಪರಮಪವಿತ್ರವಾದ ಈ ಭಾರತಭೂಮಿಯಲ್ಲಿಯೂ ಸಾಧು ಗಳಿಗೆ ಕಷ್ಟವೂ, ನಾನಾವಿಧವಾದ ಅನರ್ಥಗಳೂ, ಮಹಾಪಾತಕಗಳೂ, ದೈವದ್ವೇಷ ಧರ್ಮದ್ವೇಷಗಳೂ, ಮಿತಿಮೀರಿ ವೃದ್ಧಿಯಾಗಿ, ಜನರಲ್ಲಿ ಪರಸ್ಪರ ದ್ವೇಷಾಸೂಯೆಗಳೂ, ಆದರಿಂದ ಕಲಹಗಳೂ, ಪ್ರಜಾಕ್ಷೋಭೆಯೂ, ಉಂಟಾಗಿ ಪ್ರಪಂಚವೇ ಹಾಳಾಗುತ್ತಿರುವುದು ! ನಿರ್ಮಲ ಭಾವದಿಂದ ಸಾತ್ವಿಕವೃತ್ತಿಯಲ್ಲಿ ವರ್ತಿಸಿ ಭವತಾರಕನಾದ ಶ್ರೀರಾಮ ಚಂದ್ರನ ಚರಣಭಕ್ತಿಯನ್ನು ಅಭಿವೃದ್ಧಿಪಡಿಸಿಕೊಂಡು ಐಹಿಕಾಮುಷ್ಮಿಕಸುಖಗಳನ್ನೂ ಲೋಕಹಿತವನ್ನೂ ಗಮನಿಸಬೇಕೆಂಬ ಮೂಲ ತತ್ವವೇ ಇಂತಹ ನೀಚರ ಮನಸ್ಸಿಗೆ ಹಿಡಿದಿಲ್ಲ. ಅವಿವೇಕಿಯೂ ದುರಾಚಾರಿಯೂ ಲೋಕಶತ್ರುವೂ ಆದ ಅವನೊಡನೆ ಮಾತನ್ನು ಆಡಿದುದೇ ನನ್ನದು ಮಹಾಪರಾಧವು. ಆಯಾಸಪರಿಹಾರಕ್ಕೆಂದು ಅಲ್ಲಿ ಕುಳಿತು ಕೊಂಡುದು ಈ ಅವಿವೇಕಿಯ ಅಸಹ್ಯಕರವಾದ ನುಡಿಗಳನ್ನು ಕೇಳುವುದಕ್ಕಾಯಿತು ! ಶ್ರೀರಾಮ ! ಆಯಾಸವು ಹೆಚ್ಚಾಗಿ ಕಷ್ಟಪಟ್ಟಿದ್ದರೂ ಚಿಂತೆಯಿರಲಿಲ್ಲ ! ಈ ಹಾಳು ಮಾತುಗಳನ್ನು ಕೇಳಬೇಕಾಯಿತಲ್ಲಾ ! (ಚಿಂತಿಸಿ) ಅದೂ ಒಂದು ನಾಯಿ, ಅದು ಬೊಗಳಿದ ಮಾತ್ರಕ್ಕೇ ಛನಗೇನು ಕುಂದಕ ?

(ಹೋಗುವಳು.)

## ದೃಶ್ಯ ೮ (ಕಬೀರದಾಸನ ಮನೆ.)

ಬೀಬಿ—(ಪ್ರವೇಶಿಸಿ) ವಸ್ತ್ರವಿಕ್ರಯಕ್ಕಾಗಿ ಹೋದ ಪ್ರಿಯನು ಇನ್ನೂ ಬರಲೇ ಇಲ್ಲ. ಹೊತ್ತು ಬಹಳವಾಯಿತು, ರಾಮಧ್ಯಾನ ಲೋಲನಾದ ಆತನಿಗೆ ಗೃಹಕೃತ್ಯವೇ ಮರೆತು ಹೋಯಿತೋ ಏನೋ! (ಮನೆಯಲ್ಲಿ ಬಿದ್ದಿದ್ದ ವಸ್ತ್ರವನ್ನು ನೋಡಿ ಆಶ್ಚರ್ಯದಿಂದ) ಇದೇನು! ಪ್ರಿಯನು ವಿಕ್ರಯಕ್ಕಾಗಿ ತೆಗೆದುಕೊಂಡು ಹೋಗಿದ್ದ ವಸ್ತ್ರವು ಇಲ್ಲಿಯೇ ಇರುವುದು! ಆತನಿನ್ನೂ ಮನೆಗೆ ಬರಲಿಲ್ಲ. ಈ ವಸ್ತ್ರವು ಇಲ್ಲಿಗೆ ಹೇಗೆ ಬಂತು? ಅಥವಾ ತೆಗೆದುಕೊಳ್ಳದೆ ಇಲ್ಲಿಯೇ ಮರೆತು ಹೋದನೇ! (ಆಲೋಚಿಸಿ) ಇಲ್ಲ, ಇಲ್ಲ! ಅದನ್ನು ಮಡಿಸಿ ವಿಕ್ರಯಕ್ಕೆಂದು ಆತನು ತೆಗೆದುಕೊಂಡು ಹೋದುದನ್ನು ನಾನೇ ಕಣ್ಣಾರ ನೋಡಿದೆನು. ಆತನು ಮನೆಗೆ ಬಂದಲ್ಲದೆ ನಿಜಾಂಶವು ಸ್ಪಷ್ಟವಾಗಲಾರದು.

ಕಬೀರ—೧೩ (ರಾಮಧ್ಯಾನ ಮಾಡುತ್ತ ಪ್ರವೇಶಿಸಿ) ಪ್ರಿಯೇ, ಏನುಮಾಡುತ್ತಿರುವೆ?

ಬೀಬಿ—ಮಾಡುವುದೇನು! ಬರಿಯ ಮನೆಯಲ್ಲಿ ಕುಳಿತು ಶ್ರೀರಾಮನನ್ನು ಧ್ಯಾನಿಸುವುದೇ!

ಕಬೀರ—ಆಹಾ! ಬಹಳ ಸಂತೋಷ. ಶ್ರೀರಾಮನು ನಿನ್ನಲ್ಲಿ ಆ ಭಕ್ತಿಯನ್ನು ಸ್ಥಿರವಾಗಿಟ್ಟಿರಲಿ. ಬರಿಯ ಮನೆಯಲ್ಲಿ ನಾವಿಬ್ಬರೂ ಉಪವಾಸ ಕುಳಿತಿದ್ದರೂ ಚಿಂತೆಯಿಲ್ಲ. ಈದಿನ ಒಂದು ಕಾರ್ಯವನ್ನು ಮಾಡಿದೆನು. ಏನೆಂದರೆ—ಶ್ರೀರಾಮಚಂದ್ರನು ನೆಯ್ದ ವಸ್ತ್ರವನ್ನು ಮೊದಲು ಅಂಗಡಿಬೀದಿಗೆ ತೆಗೆದುಕೊಂಡು ಹೋದೆನು, ಅಲ್ಲಿ ಯಾರೂ ತಕ್ಕ ಬೆಲೆಯನ್ನು ಕೊಟ್ಟು ಕೊಂಡುಕೊಳ್ಳಲಾರದೆ ಹೋದರು. ಆಗ—(ಅಲ್ಲಿದ್ದ ವಸ್ತ್ರವನ್ನು ನೋಡಿ ಕೋಪದಿಂದ) ೧೪ ಎಲೌ! ಈ ವಸ್ತ್ರವನ್ನು ಆ ಬಡಬ್ರಾಹ್ಮಣನಿಂದೇತಕ್ಕೆ ಕಸಿದಿಟ್ಟುಕೊಂಡೆಯೇ? ಶ್ರೀರಾಮಚಂದ್ರನಿಗರ್ಪಿತವಾಗಲಿ ಯೆಂದು, ಚಳಿಯಲ್ಲಿ ನಡುಗುತ್ತಿದ್ದ ಆ ಬ್ರಾಹ್ಮಣನಿಗೆ ಇದನ್ನು ಕನಿಕರದಿಂದ ಹೊದಿಸಿ ಕಳುಹಿಸಿದ್ದೆನಲ್ಲವೇ! ಅಯ್ಯೋ ಕಠೋರಮನಸ್ಕಳೇ! ಆ ಬಡಬ್ರಾಹ್ಮಣನ ಮೈಮೇಲಿದ್ದ ವಸ್ತ್ರವನ್ನು ಕಿತ್ತುಕೊಳ್ಳಲು ನಿನ್ನ ಮನಸ್ಸು ಹೇಗೆ ಒಪ್ಪಿತು? ಶುಷ್ಕ

ಕಾರ್ಯವನ್ನು ಮಾಡಲು ಯತ್ನಿಸಿ ದತ್ತಾಪಹಾರ ದೋಷಕ್ಕೆ ಗುರಿಯಾ ದೆವಲ್ಲವೇ !

ಬೀಬಿ—ಪ್ರಿಯಾ ! ತಾವು ಹೇಳುವುದೊಂದೂ ನನಗೆ ವಿವರವಾಗಲಿಲ್ಲ. ಬ್ರಾಹ್ಮಣನು ಯಾರು? ದತ್ತಾಪಹಾರವೇನು? ನಾನುಬೀರಿ, ಈ ವಸ್ತ್ರದ ಕಥೆಯನ್ನೇ ಕಾಣೆನು. ತಾವು ವಿಕ್ರಯಕ್ಕೆಂದು ಪ್ರಾತಃಕಾಲದಲ್ಲಿ ಇದನ್ನು ಮಡಿಸಿ ತೆಗೆದುಕೊಂಡು ಹೋದುದನ್ನು ಮಾತ್ರ ನೋಡಿ ದ್ದೆನು. ಅನಂತರ ಗಂಗಾನದಿಗೆ ಸ್ನಾನಕ್ಕೆ ಹೋಗಿದ್ದವಳು ಮನೆಗೆ ಬಂದು ನೋಡುವಲ್ಲಿ ಈ ವಸ್ತ್ರವು ಇಲ್ಲಿಯೇ ಇತ್ತು. ತಾವೇ ಇಟ್ಟಿರಬ ಹುದೆಂದಾಲೋಚಿಸಿದೆನು. ಆದರೆ ನಾನು ಬಾಗಿಲಿಗೆ ಬೀಗವನ್ನು ಹಾಕಿಕೊಂಡು ಹೋಗಿದ್ದೆನಾದುದರಿಂದ ಅದು ಸಾಧ್ಯವಲ್ಲವೆಂದು ಈ ವಿಚಾರದಲ್ಲಿ ಸಂಶಯಗ್ರಸ್ತಳಾಗಿ ಬಹಳವಾಗಿ ಆಲೋಚಿಸಿ ತಾವು ಬಂದೊಡನೆಯೇ ಇದರ ವೃತ್ತಾಂತವನ್ನು ಕೇಳಬೇಕೆಂದಿದ್ದೆನು. ತಾವು ಇದನ್ನು ವೃದ್ಧಬ್ರಾಹ್ಮಣನಿಗೆ ದಾನಕೊಟ್ಟಿದ್ದೆನೆಂದು ಹೇಳುತ್ತಿರುವಿರಿ ಇದು ಪರಮಾಶ್ಚರ್ಯಕರವಾಗಿದೆಯಲ್ಲಾ !

ಕಬೀರ—(ಆಲೋಚಿಸಿ) ಆಹಾ ! ಇದು ಶ್ರೀರಾಮಚಂದ್ರಮೂರ್ತಿಯ ಮಹಿಮೆಯು ! ನನ್ನಿಂದ ವಸ್ತ್ರವನ್ನು ಪಡೆದ ಆ ವೃದ್ಧಬ್ರಾಹ್ಮಣನೇ ಶ್ರೀರಾಮಚಂದ್ರನೆಂಬುದನ್ನು ತಿಳಿಯದೆ ಹೋದೆನಲ್ಲಾ ! ಆಹಾ ! ಇದು ಆ ಪರಮಾತ್ಮನ ಲೀಲೆಯು. ಪ್ರೇಯಸೀ ! ನಾವು ಸಂದೇಹ ಪಡಬೇಕಾದುದಿಲ್ಲ. ಶ್ರೀರಾಮಚಂದ್ರಾನುಗ್ರಹವು ನಮ್ಮಲ್ಲಿ ಪರಿಪೂ ರ್ಣವಾಗಿರುವುದು.

೧೫ (ಒಳಗೆ)

ಕಂ|| ಜಯ ಜಗದಾದಿಮ ಕಾರಣ |
ಜಯ ಮನು ಮುನಿ ವಿನುತ ಪರಮಪಾವನ ಚರಣಾ||
ಜಯಜಯ ನಿರುಪಮ ಕರುಣಾ |
ಜಯಜಯ ಲೋಕೈಕ ಶರಣ ಕಮಲಾ ರಮಣಾ||೧೩||

ಅಮ್ಮಾ, ಬಾಗಿಲನ್ನು ತೆರೆ.

ಕಬೀರ—ಯಾರದು ?

ಬೀಬಿ—ನಮ್ಮ ಮಗ ಕಮಾಲದಾಸನು ಕೂಗುವಂತೆ ತೋರುವುದು.

ಕಬೀರ—ತೀರ್ಥಯಾತ್ರೆಗೆ ಹೋಗಿದ್ದವನು ಆಗಲೇ ಬಂದುಬಿಟ್ಟನೇ ? ನೋಡೋಣ, ಬಾಗಿಲನ್ನು ತೆರೆ.

ಬೀಬಿ—(ಬಾಗಿಲನ್ನು ತೆರೆದು ಕಮಾಲದಾಸನನ್ನು ಕರೆತರುವಳು.)

ಕಮಾಲದಾಸ—ಮಾತೆಯೇ! ನಮಸ್ಕರಿಸುವೆನು. ತಂದೆಯೇ? ವಂದಿಸುವೆನು.

ಕಬೀರ-ಬೀಬಿ—ಪುತ್ರಾ! ಚಿರಂಜೀವಿಯಾಗು.

ಕಬೀರ—ಕುಮಾರಾ! ನಿನ್ನ ಯಾತ್ರೆಯು ಪೂರ್ತಿಯಾಯಿತೆ? ಯಾವ ಯಾವ ಕ್ಷೇತ್ರಗಳನ್ನು ನೋಡಿಬಂದೆ ? ಏನು ಸಮಾಚಾರ ?

ಕಮಾಲ—ತಂದೆಯೇ, ನಾನು ಬದರಿಕಾಶ್ರಮ, ಗೋಕುಲ ಬೃಂದಾವನ, ಹರಿದ್ವಾರ ಮಥುರಾ ಕ್ಷೇತ್ರಗಳ ಯಾತ್ರೆಗಳನ್ನು ಪೂರಯಿಸಿಕೊಂಡು ತುಲಸೀ ಪ್ರಸಾದವನ್ನೂ ಗಂಗಾತೀರ್ಥವನ್ನೂ ತಂದಿರುವೆನು.

ಬೀಬಿ—ಮಗೂ, ನೀನು ಬಹು ಪುಣ್ಯಶಾಲಿಯು. ಇಷ್ಟು ಸಣ್ಣ ವಯಸ್ಸಿನಲ್ಲಿ ನಿನಗೆ ಇಂತಹ ಪುಣ್ಯಕ್ಷೇತ್ರದರ್ಶನವೂ, ಪುಣ್ಯತೀರ್ಥಗಳ ಸ್ನಾನವೂ ಲಭಿಸಿ ಪರಿಶುದ್ಧನಾಗಿರುವೆ. ನಿನ್ನನ್ನು ಪಡೆದ ನಾವೇ ಧನ್ಯರು.

ಕಬೀರ—(ಕಮಾಲನನ್ನು ನೋಡಿ) ಮಗೂ! ಕಮಾಲ್, ಎಲ್ಲಿ ? ತೀರ್ಥ ಪ್ರಸಾದಗಳನ್ನು ಕೊಡು.

ಕಮಾಲ್—ಇದೋ! ತೆಗೆದುಕೊಳ್ಳಿ (ತೀರ್ಥವನ್ನೂ ತುಲಸೀಪ್ರಸಾದವನ್ನೂ ತಂದೆ ತಾಯಿಗಳಿಗೆ ಕೊಟ್ಟು ತಾನೂ ತೆಗೆದುಕೊಳ್ಳುವನು.)

ಕಬೀರ—ಆಹಾ! ಉಪವಾಸಗಳನ್ನು ಮಾಡಿ ಹಸಿವಿನಿಂದ ಬಳಲಿದ್ದ ನನಗೆ ಈ ತೀರ್ಥಪ್ರಸಾದ ಸೇವನೆಯಿಂದ ಕ್ಷುತ್ಪಿಪಾಸಗಳೆರಡೂ ಅಡಗಿ ಈಗ ತಾನೇ ಭೋಜನಮಾಡಿದಂತೆ ತೃಪ್ತಿಯಾಗಿರುವುದು.

ಬೀಬಿ—ಪ್ರಿಯನೇ! ನನಗೂ ಹಾಯೇ ಆಗಿರುವುದಲ್ಲಾ! ಇದೇನಾಶ್ಚರ್ಯ?

ಕಮಾಲ—ಅಮ್ಮಾ! ಇರು ಇದು ಪುಣ್ಯಕ್ಷೇತ್ರ ತೀರ್ಥಗಳ ಮಹಿಮೆಯು, ಅದು ಶ್ರೀರಾಮಭಕ್ತರಾದ ನಮ್ಮಲ್ಲಿ ಈರೀತಿ ವ್ಯಕ್ತವಾಗಿರುವುದು.

ಕಬೀರ—ನಿಜ, ಶ್ರೀರಾಮಚಂದ್ರನ ಅನುಗ್ರಹವು ನಮ್ಮಲ್ಲಿ ಸಂಪೂರ್ಣವಾಗಿರುವುದು. ಆದುದರಿಂದ ನಾವು ಆತನನ್ನು ಆನಂದದಿಂದ ಭಜಿಸೋಣ.

ಮೂವರು—೧೬.

ವೃ|| ಶ್ರೀವಸುಂಧರಾತ್ಮಜಾಸ್ಯ ಪದ್ಮ ಪದ್ಮಬಾಂಧವ |
ಭಾವಜಾತ ಕೋಟಿ ಭವ್ಯರೂಪ ಭೂಪಪುಂಗವ ||
ಶೈವಚಾಪ ಭಂಗ ತುಂಗಮಂಗಳ ಪ್ರಭಾಮಯ |
ದೇವಪಾಹಿ ರಾಮ ಕಾಮಮೋಕ್ಷ ದಾತಚಿನ್ಮಯ || ೧೪ ||

ಪ್ರಥಮಾಂಕಂ ಸಂಪೂರ್ಣಂ.



# ದ್ವಿತೀಯಾಂಕಂ.

## ದೃಶ್ಯ ೧ ಮಧುಮೋಹಿನಿ ಎಂಬ ರತ್ನಾಕರನ ವಿಟಗಾತಿಯ ಮನೆ.

**ಮಧುಮೋಹಿನಿ**—೧೭ ಶ್ರೀಮಂತನಾದ ರತ್ನಾಕರನು ನನ್ನ ಮನೆಗೆ ಈಗ ಎರಡು ಮೂರು ದಿನಗಳಿಂದಲೂ ಬರಲೇ ಇಲ್ಲ. ನನ್ನನ್ನು ತನ್ನ ಬಹಿಃಪ್ರಾಣಗಳಂತೆ ಕಂಡುಕೊಂಡು ಒಂದು ದಿನವಾದರೂ ತಪ್ಪದೆ ನನ್ನಲ್ಲಿ ವಿಲಾಸಕ್ಕೆ ಬರುತ್ತಿದ್ದ ಆತನು ಈಚೆಗೆ ಇಷ್ಟು ಉದಾಸೀನತೆಯಿಂದಿರಲು ಕಾರಣವೇನು ? (ಚಿಂತಿಸಿ) ನಾನೇನಾದರೂ ಆತನ ಇಷ್ಟಕ್ಕೆ ವಿರೋಧವಾಗಿ ನಡೆದೆನೇ ? ಇಲ್ಲ, ಇಲ್ಲ ; ಅಥವಾ ಅವನ ಮಿತ್ರನಾದ ಕಾಕೋದರನೇನಾದರೂ ನನ್ನನ್ನು ದೂರಮಾಡುವಂತೆ ಆತನಿಗೆ ಬೋಧಿಸಿರಬಹುದೇ! ಅದನ್ನು ಹೇಳಲಾಗುವುದಿಲ್ಲ ; ಏತಕ್ಕೆಂದರೆ—ನಾನಾ ತಂತ್ರಗಳನ್ನು ಮಾಡಿ ನನ್ನನ್ನು ನನ್ನ ಪತಿಯಿಂದ ಅಗಲಿಸಿ ಈ ರತ್ನಾಕರನ ಕೈ ಸೇರಿಸಿದವನೇ ಆ ಕಾಕೋದರನು ; ಹೀಗಿರುವಲ್ಲಿ ಅವನು ನನಗೆ ವಿರೋಧವಾಗಿ ಬೋಧಿಸುವನೇ ! ( ಚಿಂತಿಸಿ ) ಮರ್ಮವೇನೋ ತಿಳಿಯಲಾಗುವುದಿಲ್ಲ. ಕಾಕೋದರನಾದರೋ ಅವನ ಹೆಸರಿಗೆ ತಕ್ಕಂತೆ ವಿಷಮಯವಾದ ಸರ್ಪದಂಥವನು. ಅವನೇ ರತ್ನಾಕರನಿಂದ ಸ್ವಪ್ರಯೋಜನವನ್ನು ಪಡೆಯಲು ಇನ್ನೇನಾದರೂ ಕುಟಿಲ ತಂತ್ರಗಳನ್ನು ಮಾಡಿ ಮತ್ತೆ ಯಾವಳಾದರೂ ಸ್ತ್ರೀಯಲ್ಲಿ ಆತನಿಗೆ ಆಸೆ ಹುಟ್ಟಿಸಿರಬಹುದೇ ? ಇದ್ದರೂ ಇರಬಹುದು. ಹಾಗೆ ಪರಸ್ತ್ರೀಯಲ್ಲಿ ಮನವು ನಿಲ್ಲದಿದ್ದರೆ ಪ್ರಾಣಾಪ್ತಳಾಗಿದ್ದ ನನ್ನ ಬಳಿಗೆ ಆ ರತ್ನಾಕರನು ಬಾರದಿರಲು ಕಾರಣವೇನು ? ವಿಷಯವನ್ನು ತಿಳಿಯಲು ನಾನಾಗಿ ಹುಡುಕಿಕೊಂಡು ಹೋದಾಗಲೆಲ್ಲವೂ ಆ ಕಾಕೋದರನೊಡನೆ ಏನನ್ನೋ ಗುಸುಗುಟ್ಟುತ್ತಿದ್ದು, ನನ್ನ ಮುಖವನ್ನು ಕಂಡು ಸುಮ್ಮನಾಗಿ ತನ್ನ ಮುಖವನ್ನಾ ಕಡೆಗೆ ತಿರುಗಿಸಿಕೊಳ್ಳುವನು. ಆತನು ಬೇರೆ ಗೃಹಕೃತ್ಯವಿಚಾರದಲ್ಲಿರಬಹುದೆಂದು ತಿಳಿದು ಒಂದೆರಡಾವೃತ್ತಿ ಸಮಯವಲ್ಲವೆಂದು ಹಿಂದಿರುಗಿ ಬಂದೆನು. ಆದರೂ ಆತನ ಸುಳಿವೇ ಇಲ್ಲ ; ಆತನು ಅನ್ಯ ಸ್ತ್ರೀಯಲ್ಲಿ ಆಸಕ್ತನಾಗಿಯೇ ಇರಬಹುದೆಂದು ಸಂಶಯ

ವೇನೋ ನನಗೆ ಹುಟ್ಟಿರುವುದು. ಆದುದರಿಂದ ನಾನೇ ಆತನ ಬಳಿಗೆ ಹೋಗಿ ಆತನ ಚಿತ್ತವೃತ್ತಿಯನ್ನು ಪರೀಕ್ಷಿಸುವೆನು. (ಹೋಗುವಳು.)

ದೃಶ್ಯ ೨ (ರತ್ನಾಕರನು ತನ್ನ ಮನೆಯಲ್ಲಿ ವಿರಹತಾಪದಿಂದಿರುವನು.)

ರತ್ನಾಕರ—ಎಲೈ, ಮನ್ಮಥನೇ,

೧೮ ಕಂ|| ಕಾವನೆನಿಸಿ ನೀನೆನ್ನಂ |
ಕಾವುದ ನುಳಿದಲಘು ಕುಸುಮಶರಹತಿಯಿಂದಂ ||
ಈ ವಿಧದಿಂ ಕೊಂದಪರೇಂ |
ಭಾವಜ್ಞ್ಣಯ ನೆನಗೆ ಸಾರ್ಚಿ ಪೊರೆವುದು ಮದನಾ ||

ಕಾಕೋದರ—(ಪ್ರವೇಶಿಸುವನು.)

ರತ್ನಾಕರ—ಮಿತ್ರಾ! ಕಾಕೋದರ! ಕಾರ್ಯವು ಕೆಟ್ಟುಹೋಯಿತು. ನನ್ನ ಚಿತ್ತವಾದರೋ ಲೋಕಮೋಹಿನಿಯಾದ ಆ ರಮಣಿಯಲ್ಲಿಯೇ ಸ್ಥಿರವಾಗಿ ನೆಲೆಸಿರುವುದು. ಆ ಮನೋಹರೆಯು ಲಭಿಸದಲ್ಲದೆ ನನಗೆ ಮತ್ತೆ ಯೇನೂ ಬೇಕಿಲ್ಲವಾಗಿರುವುದು. ಆ ಸುಂದರಿಯನ್ನು ಸ್ಮರಿಸಿ ಸ್ಮರಿಸಿ ತಲ್ಲೀನಚಿತ್ತನಾದ ನನಗೆ ಈ ಹಾಳು ಮಧುಮೋಹಿನಿಯು ಸ್ಮರಣೆಗೆ ಬಂದರೆ ಪಿಶಾಚದರ್ಶನವಾದಂತೆ ಆಗುವುದು. ಹೀಗಿರುವಲ್ಲಿ ನಾನು ಅವಳ ಮನೆಗೆ ಹೋಗದೆ ಇದ್ದಕಾರಣ ಅವಳು ನನ್ನನ್ನು ನೋಡಲು ಬರಲೇಬರುವಳು. ಆ ಮೋಹಿನಿಯು ಲಭಿಸಲಿಲ್ಲ. ಈ ಪಿಶಾಚದ ಕಾಟವು ತಪ್ಪಲಿಲ್ಲ. ಹೇಗಾದರೂ ಇವಳನ್ನು ತೊಲಗಿಸಿ ಆ ಮನೋಹರೆಯನ್ನು ನನ್ನ ವಶಮಾಡಿಕೊಂಡದಲ್ಲದೆ ನನ್ನ ಪ್ರಾಣಗಳು ಉಳಿಯಲಾರವು. ಈಗ ಆ ಸುಂದರಿಯನ್ನು ಕಾಣುವ ಬಗೆ ಹೇಗೆ? ನೀನಾಕೆಯನ್ನು ಮತ್ತೆ ನೋಡಲಿಲ್ಲವೇ?

ಲಿಂಗ—(ಪ್ರವೇಶಿಸಿ) ಸ್ವಾಮಿ! ನಾನಾಕೆಯನ್ನೀಗತಾನೇ ಕಂಡಿದ್ದೆನು.

ರತ್ನಾಕರ—ಯಾರನ್ನು? ಆ ನನ್ನ ಮನೋಹರೆಯನ್ನೇ?

ಲಿಂಗ—ಅಹುದು ಸ್ವಾಮಿ!

ಕಾಕೋದರ—ಎಲ್ಲಿ ಕಂಡಿದ್ದೆಯೋ ?

ಲಿಂಗ—ಕಣ್ಣಿ

ಕಾಕೋದರ—(ಕೋಪದಿಂದ) ಈ ಅಯೋಗ್ಯನು ನಾನು ಮಾತನಾಡಿದರೆ ಇಂತಹ ಅವಿವೇಕವಾದ ಉತ್ತರಗಳನ್ನೇ ಹೇಳುವನು ; (ಪ್ರಕಾಶಂ) ಎಲವೋ ! ಅವಿವೇಕೀ ನಿನ್ನ ಅಧಿಕಪ್ರಸಂಗವು ಹಾಗಿರಲಿ ! ಯಾವ ಸ್ಥಳದಲ್ಲಿ ಕಂಡಿದ್ದೆ ಆಕೆಯನ್ನು ? ಹೇಳು.

ಲಿಂಗ—ಬೀದಿಯಲ್ಲಿ ಬರುತ್ತ ನನಗೆ ಎದುರಾಗಿ ಸಂಧಿಸಿ ಆಕೆ ರಾಯರೆಲ್ಲಿರುವರೆಂದು ಕೇಳಿದಳು.

ರತ್ನಾಕರ—ಮಿತ್ರಾ ! ಮಿತ್ರಾ ! ಹಾಗಾದರೆ ಮೊದಲು ಪ್ರಯತ್ನಮಾಡೋಣ. ನಿನ್ನೆಯದಿನ ನೀನು ಬಹಿರಂಗವಾಗಿ ಆಕೆಯನ್ನು ಮಾತನಾಡಿಸಿದಕಾರಣ ಕುಪಿತಳಾಗಿ ಹೋದಳೆಂದು ಕಾಣುವುದು. ಈಗ ಪಶ್ಚಾತ್ತಾಪದಿಂದ ಈರೀತಿ ಕೇಳಿರಬಹುದಲ್ಲವೇ ?

ಕಾಕೋದರ—ಇದ್ದರೂ ಇರಬಹುದು. ಎಲವೋ ! ಸೇವಕಾ ! ಆಕೆ ಯಾವ ಕಡೆ ಬರುತ್ತಿದ್ದಳೋ ?

ಲಿಂಗ—ಈ ಮಾರ್ಗವಾಗಿಯೇ ಬರುತ್ತಿದ್ದಳು. ಮೈಮೇಲೆ ಯಾವ ಆಭರಣಗಳೂ ಇಲ್ಲದೆ ಬಹಳ ಖಿನ್ನಳಾಗಿದ್ದಳು.

ರತ್ನಾಕರ—ಆ ಹುಚ್ಚನಿಗೆ ಅವಳು ಬಡವಳೆಂದು ತಿಳಿಯದು. ಅವಳಿಗೆ ಆಭರಣಗಳೆಲ್ಲಿ ಬರಬೇಕು ! ನಾವು ತಂದುಕೊಟ್ಟರಲ್ಲವೆ ಆಭರಣಗಳು !

ಲಿಂಗ—ಅದಕ್ಕೇ ಆಕೆಯು ತಮ್ಮನ್ನು ವಿಚಾರಿಸಿದಳೆಂದು ತೋರುವುದು.

ರತ್ನಾಕರ—ಬಹಳ ಸಂತೋಷ, ಬಹಳ ಸಂತೋಷ ! ಹಾಗಾದರೆ ಅವಳು ಇಲ್ಲಿಗೆ ಬರುವುದೊಂದಾದರೆ ಅವಳಿಗೆ ಆಭರಣಗಳಿಗೆ ಕಡಿಮೆಯೇ ? ನನ್ನ ಸರ್ವಸ್ವವನ್ನೂ ಅವಳ ವಶಮಾಡಿ ಅವಳಿಗೆ ಬೇಕುಬೇಕಾದಂತಹ ವಸ್ತ್ರಾಭರಣಗಳನ್ನು ತಂದುಕೊಡುವೆನು.

ಕಾಕೋದರ—ಇಷ್ಟಾದಮೇಲೆ, ಆಕೆಯನ್ನು ಸಾಧಿಸುವುದು ಕಷ್ಟವಲ್ಲ. ನೀನು ಆಲೋಚಿಸಬೇಡ. ಇನ್ನೂ ಅಮೂಲ್ಯವಾದ ರತ್ನಾಭರಣಗಳನ್ನು ತರುವೆನು. ಇನ್ನೂ ನಾಲ್ಕುನೂರು ವರಹಗಳನ್ನು ಕೊಡು

ಲಿಂಗ—(ಆತ್ಮಗತಂ) ಅದು ಮೊದಲು ! ನೂರುಗಳ ಲೆಕ್ಕವೇ ಅಲ್ಲದೆ ಸಾಧಾರಣವಿಲ್ಲವೇ ಇಲ್ಲ.

ರತ್ನಾಕರ—ನಾಲ್ಕು ನೂರಲ್ಲದಿದ್ದರೆ ಹದಿನಾಲ್ಕು ನೂರುವರಹಗಳನ್ನು ತೆಗೆದುಕೋ, ನನ್ನ ನಿಧಿಯೇ ನಿನ್ನದಾಗಿರುವುದು. ಕೇಳಬೇಕೇ ?

ಲಿಂಗ—ಇವನಿಂತಹ ಹುಚ್ಚನೆಂದು ತಿಳಿದೇ ಅವನು ತಕ್ಕ ಬಲೆಯನ್ನೊಡ್ಡುತ್ತಿರುವನು.

ರತ್ನಾಕರ—ಮಿತ್ರಾ ! ಕಾಕೋದರ ! ಆ ನಾರಿಯನ್ನು ಸಾಧಿಸಬೇಕು. ಈ ಮಾರಿಯನ್ನು ತೊಲಗಿಸಬೇಕು. ಇವೆರಡು ಕಾರ್ಯಗಳನ್ನೂ ನೀನು ಮೊದಲು ಮಾಡಬೇಕು.

ಮಧುಮೋಹಿನಿ—(ಬಾಗಿಲಿಗೆ ಬಂದು) ಈಗ ಸಮಯವನ್ನರಿತು ಇವನಿಗೆ ಕಾಣಿಸಿಕೊಳ್ಳುವೆನು.

ರತ್ನಾಕರ—ಕಾಕೋದರ ! ಆ ರಮಣಿಯು ಇತ್ತಲೇ ಬರುತ್ತಿರುವಳೆಂದು ಲಿಂಗನು ಹೇಳಿದನಷ್ಟೆ ! ಆಕೆಯನ್ನು ವಿನಯದಿಂದ ಮಾತನಾಡಿಸಿ ಕರೆದುಕೊಂಡು ಬಾ.

ಲಿಂಗ—(ನೋಡಿ) ಸ್ವಾಮಿಾ ! ಆಕೆಯು ದ್ವಾರದಲ್ಲಿ ಬಂದು ನಿಂತಿರುವಳು.

ಕಾಕೋದರ—ಭಲಾ ! ಪ್ರಯತ್ನವಿಲ್ಲದೆ ನಮ್ಮ ಕಾರ್ಯವಾಯಿತು. ಮಿತ್ರಾ ! ನೀನೇ ಬಾಗಿಲಿಗೆ ಹೋಗಿ ಕರೆತರುವುದುತ್ತಮ.

ರತ್ನಾಕರ—ನಾನು ಕರೆದರೆ ನಾಚಿಕೆಪಡುವಳೋ ಹೇಗೋ ! (ಆಲೋಚಿಸಿ) ಆಗಲಿ, ನಾನೇಹೋಗಿ ಕರೆತರುವೆನು (ಬಾಗಿಲಿಗೆ ಬಂದು ಬೀಬಿಯೆಂಬ ಭ್ರಾಂತಿಯಿಂದ)

ಕಂ|| ಸುಮಶರನರಗಿಣಿ, ಮತ್ಪ್ರಿಯ |
ರಮಣೀಮಣಿ, ಮಧುರವಾಣಿ, ಮಧುಕರವೇಣೀ ||
ರಮಣೀಯ ವಿಲಾಸದೊಳಂ |
ದಮಿತಾನಂದಮನೆ ನೀಡು ಬಾಬಾ ತರುಣೀ ||೧೬||

ಭುವನಮೋಹಿನೀ ! ನಿನ್ನ ಅನುಗ್ರಹಕ್ಕೆ ಪಾತ್ರನಾದ ನಾನೇ ಧನ್ಯನು. ಬಾ, ನನ್ನ ಭವನವನ್ನಲಂಕರಿಸು

ಮಧುಮೋಹಿನಿ—ಪ್ರಿಯನೇ ಬಹಳ ಸಂತೋಷ ! (ಹೊದ್ದಿದ್ದ ಮೇಲು ಮುಸುಕನ್ನು ತೆರೆಯುವಳು.)

ರತ್ನಾಕರ—(ಅಸಹ್ಯಪಟ್ಟು ಆತ್ಮಗತ) ಅಯ್ಯೋ ! ಈ ಪಿಶಾಚಿಯು ! ನಾನು ಆ ಮನೋಹರೆಯೆಂದರಿತಿದ್ದೆನು. (ಹಿಂದಕ್ಕೆ ಬರುವನು.)

ಮಧುಮೋಹಿನಿ—ಪ್ರಿಯನೇ ! ಈಗ ಮೂರುದಿನಗಳಿಂದ ನಿನ್ನ ದರ್ಶನವನ್ನೂ ಮಾತನ್ನಾಡಲುಸಹ ಅವಕಾಶವನ್ನೂ ಕೊಡದೆ ಇದ್ದ ನೀನು ಈಗಲಾದರೂ ಹೀಗೆ ಮಾತನಾಡಿಸಿದೆಯಲ್ಲವೇ ! ಸಂತೋಷ.

ರತ್ನಾಕರ—(ಆತ್ಮಗತ) ನಾನಿವಳ ಮುಖವನ್ನೇ ನೋಡಲಾರೆನು. ಏನು ಮಾಡಲಿ ! ಏನಾದರೂ ಒಂದು ಉತ್ತರವನ್ನು ಹೇಳಿ ಬೇಗನೆ ಸಾಗಿಸಿಬಿಡುವೆನು. (ಪ್ರಕಾಶಂ) ಪ್ರಿಯೇ ! ಏನೋ ಸ್ವಲ್ಪಗೃಹಕೃತ್ಯವಿಚಾರಗಳಲ್ಲಿ ಮಗ್ನನಾಗಿದ್ದ ನಾನು ನಿನ್ನನ್ನು ನೋಡಲು ಬರಲಿಲ್ಲ ಅದನ್ನು ಪರ್ಯಯವಾಗಿ ಎಣಿಸಬೇಡ.

ಮಧುಮೋಹಿನಿ—ಇಲ್ಲ, ಇಲ್ಲ,(ಮೆಲ್ಲನೆ)ಹಾಗಾದರೆ ಈ ದಿನ ಮನೆಗೆ ಬರುವೆಯೋ ಇಲ್ಲವೋ ?

ರತ್ನಾಕರ—(ಮೆಲ್ಲನೆ) ಓಹೋ ! ಸಂದೇಹವಿಲ್ಲದೆ ಬರುವೆನು. ಈಗ ಇಲ್ಲಿ ನನ್ನ ಸ್ನೇಹಿತನೂ ಸೇವಕನೂ ಇರುವರು. ಆದರಿಂದ ಮಾತನಾಡಲು ಸಮಯವಲ್ಲ, ನೀನು ಹೊರಡು, ನಾನು ಬೇಗನೆ ಬರುವೆನು.

ಮಧುಮೋಹಿನಿ—(ಆತ್ಮಗತ) ಆಹಾ ! ಪ್ರಿಯನ ಅನುರಾಗದ ವಿಷಯದಲ್ಲಿ ನಾನು ಸಂಶಯಪಟ್ಟಿದ್ದೆನು. ಪಾಪ ! ಈತನು ನನ್ನನ್ನು ವಂಚಿಸತಕ್ಕವನಲ್ಲ (ಪ್ರಕಾಶ) ಪ್ರಿಯಾ ! ಹಾಗಾದರೆ, ನಿಜವಾಗಿಯೂ ಬರುವೆಯೋ ?

ರತ್ನಾಕರ—ನಿಜವಾಗಿಯೂ ಬರುವೆನು, ನೀನು ಹೊರಡು.

ಮಧುಮೋಹಿನಿ—ಹಾಗೆಯೇ ಆಗಲಿ. (ಹೋಗಿ ಬಾಗಿಲಲ್ಲಿ ಹೊಂಚು ಕೇಳುತ್ತ ನಿಲ್ಲುವಳು.)

ರತ್ನಾಕರ—(ಕೋಪದಿಂದ ಲಿಂಗನನ್ನು ನೋಡಿ) ಎಲವೋ! ಭ್ರಷ್ಟ! ನೀನು ನನ್ನ ಮನೋಹರೆಯನ್ನು ಕಂಡಿದ್ದೆನೆಂದು ಸುಳ್ಳನ್ನು ಹೇಳಿ ಮೋಸಮಾಡಿದೆಯಲ್ಲವೇ ?

ಲಿಂಗ—ಸ್ವಾಮಿ! ಕ್ಷಮಿಸಬೇಕು. ತಮ್ಮ ಮನೋಹರೆಯೆಂದರೆ ಈ ಮಧು ಮೋಹಿನಿಯಮ್ಮನವರೆಂದೇ ನಾನು ಹೇಳಿದ್ದು. ಆಕೆಯನ್ನೇ ನಾನು ಕಂಡಿದ್ದುದು

ಕಾಕೋದರ—ಛೀ! ಭ್ರಷ್ಟಾ! ರತ್ನಾಕರನು ಆ ಕಬೀರದಾಸನ ಪತ್ನಿ ಯನ್ನು ಕುರಿತು ಅಲ್ಲವೇನೋ ಮನೋಹರೆಯೆಂದು ಹೇಳಿದ್ದು ?

ಲಿಂಗ—ಸ್ವಾಮಿ! ಕೈಗೆ ಸಿಕ್ಕದೆ, ಬಾಯಿಂದ ಮಾತನಾಡದೆ, ಕಣ್ಣೆತ್ತಿ ಸಹ ನೋಡದೆ ತಿರಸ್ಕರಿಸಿದ ಆ ಮಹಾಪತಿವ್ರತೆಯು ಇವರಿಗೆ ಹೇಗೆ ಮನೋ ಹರೆಯಾದಳೆಂಬುದು ನನಗೆ ಗೊತ್ತಾಗಲಿಲ್ಲ. ಬಹಳ ದಿನಗಳಿಂದಲೂ, ಇವರು ಈ ಮಧುಮೋಹಿನಿಯಮ್ಮನವರನ್ನೇ "ಮನೋಹರೆ ಮನೋ ಹರೆ" ಎಂದು ಹೇಳುತ್ತಿದ್ದುದನ್ನು ನೋಡಿ, ಕೇಳಿದ್ದೆನಾದಕಾರಣ ನಾನು ಆಕೆಯ ಬರುವಿಕೆಯನ್ನು ತಿಳಿಸಿದೆನು.

ಕಾಕೋದರ—ನೀನು ಅಯೋಗ್ಯನು, ಭ್ರಷ್ಟನು, ಯುಕ್ತಿಹೀನನು!

ಲಿಂಗ—ನಿಜ, ಸ್ವಾಮಿ, ತಮ್ಮಂಥವರ ಮುಂದೆ ನಾನು ಅಯೋಗ್ಯನು; ಮನ್ನಿಸಿ.

ಮಧುಮೋಹಿನಿ—(ಮರೆಯಲ್ಲಿ ಹೊಂಚು ಕೇಳುತ್ತಿದ್ದು ಆತ್ಮಗತ) ಓಹೋ! ನನ್ನ ಊಹೆಯಂತೆ ಇವನು ಅನ್ಯಕಾಂತಾಸಕ್ತನೆಂಬುದು ವ್ಯಕ್ತವಾ ಯಿತು. ಇರಲಿ, ಇನ್ನೂ ಏನೇನು ನಡೆಯುವುದೋ ನೋಡುವೆನು.

ರತ್ನಾಕರ—ಕಾಕೋದರ! ಆ ರಮಣಿಯನ್ನು ಕರೆತರಲು ಮೊದಲು ಪ್ರಯತ್ನಗಳನ್ನು ಮಾಡಲೇಬೇಕು. ಈ ಹಾಳು ಮಧುಮೋಹಿನಿಗೆ ಇಲ್ಲಿ ಬರಲವಕಾಶವನ್ನೇ ಕೊಡಬಾರದಾಗಿತ್ತು.

ಮಧುಮೋಹಿನಿ—(ಹಿಂದಿನಿಂದ ಬಂದು ರತ್ನಾಕರನ ಸೋಟಿಯನ್ನು ತಿವಿದು) ಈ ಮಧುಮೋಹಿನಿಗೆ ಅವಕಾಶವನ್ನೇ ಕೊಡಬಾರದಾಗಿತ್ತೋ ? ಮೊದಲೇತಕ್ಕೆ ನನ್ನನ್ನು ಬಯಸಬೇಕಾಗಿತ್ತು ?

ರತ್ನಾಕರ—(ಭ್ರಾಂತನಾಗಿ–ಆತ್ಮಗತ) ಈ ಶ್ಲೋಕಗಳು ಇಲ್ಲಿಯೇ ಇದ್ದುದನ್ನು ಕಾಣದೆ ಮಾತನಾಡಿದೆನು. ಇಂತಹ ಕೆಟ್ಟ ಹೆಂಗಸರಿಗೆ ಸ್ವಾರಳ್ಯವನ್ನು ಕೊಟ್ಟರೆ ಇದುತಾನೇ ಫಲ ! ಯಾವನ್ನೇಹಿತರಿರಲಿ, ದೊಡ್ಡವರಿರಲಿ ! ಚಿಕ್ಕವರಿರಲಿ ! ಯಾರೇ ಇರಲಿ, ಹೀಗೆ ಮಿತಿಮೀರಿ ವರ್ತಿಸಿ ಮಾನವನ್ನು ಕಳೆಯುವರು.

ಲಿಂಗ—(ಆತ್ಮ) ನಮ್ಮರಾಯರಿಗೆ ಇಂತಹ ಮತ್ತೊಂದು ಗ್ರಹವನ್ನು ಗಂಟು ಹಾಕಿಕೊಳ್ಳಬೇಕೆಂಬ ಚಪಲ !

ರತ್ನಾಕರ—(ಆತ್ಮಗತ) ಈ ಪಿಶಾಚಿಯನ್ನು ಉಪಾಯದಿಂದ ತೊಲಗಿಸಿಕೊಳ್ಳಬೇಕು. (ಪ್ರಕಾಶ) ಸುಂದರಿ ! ಇಲ್ಲಿ ಈಗ ಈ ರೀತಿಯಾಗಿ ಮಾತನಾಡಲು ಒಂದು ವಿಚಿತ್ರಕಾರಣವಿರುವುದು. ಅದನ್ನು ನಿನಗೆ ನಿನ್ನ ಮನೆಯಲ್ಲಿ ತಿಳಿಸುವೆನು. ನೀನು ವಿರೋಧವನ್ನೆಣಿಸಬೇಡ. ಸುಮ್ಮನೆ ಹೋಗು.

ಮಧುಮೋಹಿನಿ—ಓಹೋ! ಹಾಗೋ! ಚಿಂತೆಯಿಲ್ಲ, ಹಾಗಾದರೆ ಸಂತೋಷ. ನೀನು ಬರುವಾಗ ನಾನು ಹೇಳಿದ್ದ ಮುತ್ತಿನ ಹಾರವನ್ನು ತರುವೆಯೋ ?

ರತ್ನಾಕರ—ಓಹೋ ! ತರುವೆನು. ಕಾಕೋದರ ! ನಾನು ಹೇಳಿದ್ದ ಮುತ್ತಿನ ವಿಚಾರವೇನಾಯಿತು ?

ಕಾಕೋದರ—ಮಾತನಾಡಿಕೊಂಡು ಬಂದಿರುವೆನು. ಹಳೆಯ ಮುತ್ತು ಚೆನ್ನಾಗಿಲ್ಲದ್ದರಿಂದ ಹೊಸ ಮುತ್ತನ್ನು ತರಲೇರ್ಪಡಿಸಿರುವೆನು. ಅದು ಇಷ್ಟರಲ್ಲಿಯೇ ನಿನ್ನ ಕೈಸೇರುವುದು.

ರತ್ನಾಕರ—ಪ್ರೀಯೇ ! ಕೇಳಿದೆಯಾ ? ಹೊಸಮುತ್ತು ಬಂದ ಕೂಡಲೇ ನಿನಗೆ ಒಳ್ಳೆಯ (ಪ್ರ) ಹಾರಗಳನ್ನು ಕೊಡುವೆನು. ಈಗ ಎಂದಿನ ಮುತ್ತುಗಳೇ ನಿನಗಲಂಕಾರವಾಗುವವು.

ಮಧುಮೋಹಿನಿ—(ನಕ್ಕು) ನಿನ್ನ ಕುಚೇಷ್ಟೆಯು ಸಾಕು ! ಹಾಗಾದರೆ, ನಾನು ಹೊರಡುವೆನು : ನೀನು ಸಂಧ್ಯಾಕಾಲಕ್ಕೆ ಮನೆಗೆ ಬರುವೆಯೋ ?

ರತ್ನಾಕರ—ಆಗಲಿ ಬರುವೆನು, ನೀನು ಹೊರಡು; ಇನ್ನೂ ನಿನಗೆ ಸಂಶಯವೇ ?

ಮಧುಮೋಹಿನಿ—ಇಲ್ಲ! ಇಲ್ಲ! (ಆತ್ಮಗತ) ಪ್ರಿಯನಿಗೆ ಬೇರೆ ಅಭಿಪ್ರಾಯವಿಲ್ಲ, ಇನ್ನು ನಾನು ನಿಶ್ಚಿಂತಳಾಗಿ ಹೋಗಿ ಆತನ ಆಗಮನವನ್ನು ನಿರೀಕ್ಷಿಸುತ್ತಿರುವೆನು. (ಹೋಗುವಳು.)

ರತ್ನಾಕರ—ಮಿತ್ರಾ! ಈ ಗ್ರಹವು ಸದ್ಯಕ್ಕೆ ಹಾಳಾಗಿ ಹೋಯಿತು.

ಲಿಂಗ—ಈ ಗ್ರಹದ ಮೇಲೆ ಆಗ್ರಹ, ಆ ಗ್ರಹಕ್ಕೆ ಇವನ ಮೇಲೆ ಆಗ್ರಹ. ಇವನು ಬಯಸುವುದು ಅವಳ ಅನುಗ್ರಹ. ಅಹಹಾ! ಏನೆಂದು ಹೇಳೋಣ.

ಕಾಕೋದರ—ಮಿತ್ರಾ! ನೀನು ನಿರಾಶನಾಗಬೇಡ. ನಾನು ಇನ್ನೂ ಚಾತುರ್ಯವನ್ನು ಪ್ರಯೋಗಿಸಿ ನಿನ್ನ ಕಾರ್ಯವನ್ನು ಸರಿಮಾಡುವೆನು.

ಲಿಂಗ—(ಆತ್ಮಗತ) ನಿನ್ನ ಕಾರ್ಯವನ್ನೇ ಸರಿಮಾಡುವನೋ, ನಿನ್ನನ್ನೇ ಸರಿ ಮಾಡಿ ಬಿಡುವನೋ!

ರತ್ನಾಕರ—ಏನಾದರೂ ಮಾಡು; ಆದರೆ ಈಗ ಮಾಡಿದಂತೆ ವಿರಸವನ್ನು ಮಾತ್ರ ತಂದುಕೊಳ್ಳಬೇಡ.

ಕಾಕೋದರ—ಮಿತ್ರಾ! ವಿರಸಬಂತೆಂದು ಕಾರ್ಯವನ್ನು ಬಿಡಲಾದೀತೇ? ಇನ್ನೂ ಬೇರ ಉಪಾಯಗಳನ್ನು ಮಾಡುವೆನು.

ಲಿಂಗ—ಸ್ವಾಮಿ! ತಮ್ಮದೇನೋ ಉಪಾಯ, ಆಗುವುದೇನೋ ಅಪಾಯ!

ಕಾಕೋದರ—ಈ ಭ್ರಷ್ಟನ ಹರಟೆಗಳು ಬಲವಾದುವಲ್ಲಾ? ಏನು ಮಾಡೋಣ.!

ರತ್ನಾಕರ—ಎಲವೋ! ಲಿಂಗಾ! ಆತನ ಮಾತುಗಳಿಗೆ ನೀನು ಪ್ರತ್ಯುತ್ತರವನ್ನು ಕೊಡಬೇಡವೊ.

ಲಿಂಗ—ಅಪ್ಪಣೆ ಸ್ವಾಮಿ!

ಕಾಕೋದರ—ಪ್ರತಿಮಾತಿಗೂ ಸೊಟ್ಟಮಾತುಗಳನ್ನೇ ಆಡಿ ಕಾರ್ಯವನ್ನು ಕೆಡಿಸುತ್ತಿರುವನು.

ಲಿಂಗ—(ಆತ್ಮ) ಕಾರ್ಯವು ನೆಟ್ಟಗಿದ್ದರೆ ಮಾತು ನೆಟ್ಟಗಿರುವುದು. ಅದೂ ಸೊಟ್ಟ, ಇದೂ ಸೊಟ್ಟ.

ಕಾಕೋದರ—ಮಿತ್ರಾ! ಬಾ! ಇನ್ನೊಂದುಪಾಯವನ್ನು ಹೇಳುವೆನು.

ಲಿಂಗ—(ಆತ್ಮ) ಒಂದುಪಾಯದಿಂದ ಇಷ್ಟಾಯಿತು. ಇನ್ನು ಯಾವ ಉಪಾಯ ಮಾಡುವನೋಕಾಣೆ. ಇವರಿಬ್ಬರೂ ಸೇರಿರುವುದು ಬೆಂಕಿ ಗಾಳಿಗಳು ಸೇರಿದಂತೆ ಆಗಿದೆ, ಕಡೆಗೆ ಮನೆಯಲ್ಲಿರುವ ಐಶ್ವರ್ಯವೆಲ್ಲವೂ ಸುಟ್ಟು ಇವರೂ ತಣ್ಣಗಾಗುವರು. ಒಬ್ಬರು ಬುದ್ಧಿ ಹೇಳಿದರೆ ಕೇಳುವುದಿಲ್ಲ. ತಮಗೆ ಬುದ್ಧಿಯಿಲ್ಲ. ಆದುದಾಗಲಿ, ನಾನು ಜೀವನಕ್ಕಾಗಿ ವಿಷಕ್ರಿಮಿಯಂತೆ ಇವರಲ್ಲಿರಬೇಕಾಗಿರುವುದು. (ಹೋಗುವನು.)

ರತ್ನಾಕರ—ಮಿತ್ರಾ ಉಪಾಯವೇನು ? ಹೇಳು! ಅದನ್ನು ಕೂಡಲೇ ಮಾಡೋಣ.

ಕಾಕೋದರ—ಮತ್ತೇನೂ ಇಲ್ಲವು, ನೀನು ಮೊದಲು ಆ ಕಬೀರದಾಸನ ಮನೆಯ ಪಕ್ಕದಲ್ಲಿ ಒಂದು ರತ್ನಪಡಿಯ ಅಂಗಡಿಯನ್ನಿಡಿಸು. ನೀನು, ಆತನು ಆ ಮಾರ್ಗವಾಗಿ ಬಂದಾಗ ಬಹಳಪ್ರೀತಿಯನ್ನು ನಟಿಸಿ ಮಾತನಾಡಿಸುತ್ತಿರು. ಮುಂದಿನ ಉಪಾಯವನ್ನು ನಾನು ಮಾಡುವೆನು.

ರತ್ನಾಕರ—ಹಾಗೆಯೇ ಆಗಲಿ! ನಾಳೆಯದಿನವೇ ಆ ಕಾರ್ಯವನ್ನು ಮಾಡುವೆವೆಮ ಬಾ.

ಕಾಕೋದರ—ಸರಿ ಹಾಗಾದರೆ ರತ್ನಪಡಿಯ ವ್ಯಾಪಾರಕ್ಕಾಗಿ ಈಗ ಮೂಲಧನವು ಬೇಕಲ್ಲವೇ ? ಮೊದಲು ಕೊಡು ಹತ್ತುಸಾವಿರ ವರಹಗಳನ್ನು.

ರತ್ನಾಕರ—ಬಾ! ಕೊಡುವೆನು. (ಹೋಗುವರು.)

ದೃಶ್ಯ ೩ (ಕಬೀರದಾಸನ ಮನೆ.)

ಕಬೀರ ಕಮಾಲ್ ಮತ್ತು ಬೀಬಿಯರು-(ರಾಮಭಜನೆ ಮಾಡುತ್ತಿರುವರು.)

೧೯ ಕಂ|| ಜಯಜಯ ಸೀತಾವಲ್ಲಭ |
ಜಯ ಪದನತ ಭಕ್ತಸುಲಭ ಜಲಧರ ಶೋಭಾ ||
ಜಯ ದಿನಕರ ಕೋಟಿಪ್ರಭ |
ಜಯ ಕಲುಷಕ್ಷೋಭ ದಿವ್ಯ ಪಂಕಜ ನಾಭಾ ||೧೭||

(ಒಳಗೆ) ಶ್ರೀ ಜಯ ಸೀತಾರಾಮ ! ಜಯ ಸೀತಾರಾಮ !!

ಕಬೀರ—ದ್ವಾರದಲ್ಲಿ ಸಾಧುಗಳು ಬಂದಂತೆ ಧ್ವನಿಯು ಕೇಳಿಬರುತ್ತಿರುವುದು ! ಮಗೂ ಕಮಾಲ್, ಹೋಗಿ ನೋಡು; ಸಾಧುಗಳಾಗಿದ್ದಲ್ಲಿ ಕರೆದು ಕೊಂಡು ಬಾ.

ಕಮಾಲ್—ಹಾಗೆಯೇ ಆಗಲಿ (ಹೋಗಿ ಮೂರುಮಂದಿ ಸಾಧುಗಳನ್ನು ಕರೆ ತರುವನು.)

ಕಬೀರ—ಮಹಾತ್ಮರಿಗೆ ನಮಸ್ಕರಿಸುವೆವು.

ಸಾಧುಗಳು—ಶ್ರೀರಾಮಚಂದ್ರನು ನಿಮಗೆ ಮಂಗಳವನ್ನುಂಟುಮಾಡಲಿ.

ಕಬೀರ—ಪೂಜ್ಯರೇ ! ತಮ್ಮ ದರ್ಶನದಿಂದ ಕೃತಾರ್ಥರಾದೆವು. ತಮ ಸುಖಾಗಮನವೆಲ್ಲಿಂದ ?

ಸಾಧುಗಳು—ಸ್ವಾಮಿ ! ನಾವು ಬದರಿಕಾಶ್ರಮ ಮೊದಲಾದ ದಿವ್ಯ ಕ್ಷೇತ್ರ ಗಳನ್ನು ಸಂಚರಿಸಿ ರಾಮೇಶ್ವರಕ್ಕೆ ಹೊರಟಿರುವೆವು. ಪರಮಭಕ್ತ ಶಿರೋಮಣಿಯಾದ ನಿಮ್ಮನ್ನು ನೋಡಿ ನಮಗಾನಂದವಾಯಿತು.

ಕಬೀರ—ಪೂಜ್ಯರೇ ! ಬಹಳ ಸಂತೋಷ; ತಮ್ಮ ಸಂದರ್ಶನದಿಂದ ನಾವು ಧನ್ಯರಾದೆವು.

ಬೀಬಿ—(ಸಾಧುಗಳಿಗೆ ವಂದಿಸಿ) ಪೂಜ್ಯರೇ ! ಈ ದಿನ ಏಕಾದಶಿಯು.ನಾಳೆಯ ದಿನ ಪ್ರಾತಃಕಾಲ ಪಾರಣೆಗಾಗಿ ನಮ್ಮ ಆತಿಥ್ಯವನ್ನು ಪರಿಗ್ರಹಿಸಬೇ ಕಾಗಿ ಬೇಡುವೆವು.

ಸಾಧುಗಳು—(ಆಲೋಚಿಸಿ) ಎಲೌ ! ಸಾಧ್ವೀಮಣಿ ! ಹಾಗೆಯೇ ಆಗಲಿ.

ಕಬೀರ—ಪ್ರಿಯೇ ! ಸಮಯೋಚಿತವಾದ ಅತಿಥಿಸತ್ಕಾರಬುದ್ಧಿಯು ನಿನಗಿ ರುವುದಕ್ಕಾಗಿ ನಾನು ಬಹು ಸಂತೋಷಪಡುತ್ತೇನೆ. ಮಗೂ ! ಕಮಾಲ್ ! ಪೂಜ್ಯರಿಗೆ ಆ ನಮ್ಮ ನೇಯ್ಗೆಯ ಮನೆಯಲ್ಲಿ ನಿಲ್ಲುವು ದಕ್ಕೆ ಸ್ಥಳವನ್ನು ತೋರಿಸು. ವಿಶ್ರಮಿಸಿಕೊಳ್ಳಲಿ.

ಕಮಾಲ್—ಅಪ್ಪಣೆ, ಪೂಜ್ಯರೇ ! ದಯಮಾಡಿಸಬೇಕು. (ಕರೆದುಕೊಂಡು ಹೋಗುವನು.)

ಬೀಬಿ—(ಪಶ್ಚಾತ್ತಾಪದಿಂದ) ಪ್ರಿಯಾ ! ಈ ದಿನ ಏಕಾದಶಿಯಾದಕಾರಣ ಪರದೇವತಾ ಸ್ವರೂಪರಾದ ಅತಿಥಿಗಳನ್ನು ಆದರಿಸದೆ ಕಳುಹಿಸ ತಕ್ಕು ದಲ್ಲವೆಂದು, ಈ ಸಾಧುಗಳಿಗೆ ನಾಳಿನದಿನಕ್ಕೆ ಆಮಂತ್ರಣವನ್ನು ಕೊಟ್ಟ್ಟು ದಾಯಿತು. ಮನೆಯಲ್ಲಿ ನೋಡಿದರೆ ಒಂದು ಕಾಳಾದರೂ ಧಾನ್ಯವಿಲ್ಲ. ಅಡಿಗೆಗೆ ತಕ್ಕ ಪರಿಕರಗಳಿಲ್ಲ. ನಾಳಿನದಿನ ಸೂರ್ಯೋದಯದೊಳಗಾಗಿ ಅವರು ಭೋಜನಮಾಡುವುದಕ್ಕೆ ಅನುಕೂಲವಾಗಿ ನಾವು ಎಲ್ಲವನ್ನೂ ಸಿದ್ಧಪಡಿಸಿ ಕೊಡಬೇಕು. ಇದು ಸಾಧ್ಯವೇ ? ಅತಿಥಿ ಸತ್ಕಾರ ಮಾಡ ಬೇಕೆಂಬಾತುರದಿಂದ ಹಿಂದುಮುಂದನ್ನು ನೋಡದೆ ಈ ರೀತಿಯಾಗಿ ಅವರನ್ನು ನಿಲ್ಲಿಸಿಕೊಂಡೆನಲ್ಲಾ ! ಮುಂದೆ ಗತಿಯೇನು ?

ಕಬೀರ—ಪ್ರಿಯೇ ! ಇದಕ್ಕೆ ಇಷ್ಟು ಚಿಂತಿಸಬೇಕೇ? "ಅಭ್ಯಾಗತಸ್ಸ್ವಯಂ ವಿಷ್ಣುಃ" ಎಂಬಂತೆ ಅತಿಥಿ ಅಭ್ಯಾಗತರುಗಳು ಸಾಕ್ಷಾತ್ಪರಮಾತ್ಮಸ್ವ ರೂಪರು. ಅವರುಗಳನ್ನಾರಾಧಿಸುವುದಕ್ಕೆ ನಮಗೆ ಶ್ರೀರಾಮನ ದಯ ದಿಂದ ಹೇಗಾದರೂ ಅನುಕೂಲತೆಯೊದಗುವುದು.

ಬೀಬಿ—ಈ ವೇದಾಂತದ ಮಾತುಗಳನ್ನು ಹೇಳುವಿರಿಮಾತ್ರವಲ್ಲದೆ ತಕ್ಕ ಪದಾರ್ಥಗಳನ್ನು ಒದಗಿಸಲು ಏನುಪ್ರಯತ್ನ ಮಾಡಬೇಕೆಂಬದನ್ನು ಆಲೋಚಿಸಲಿಲ್ಲ !

ಕಮಾಲ್—ಅಮ್ಮಾ! ಇದೇನು ಹೀಗೆಹೇಳುವೆ ? ಸಕಲವೂ ಸರ್ವ ಚೈತನ್ಯ ಸ್ವರೂಪನಾದ ಪರಮಾತ್ಮನ ಅಧೀನವು ಆತನಲ್ಲಿ ನಮಗೆ ಭಕ್ತಿಯು ಸ್ಥಿರವಾಗಿದ್ದರೆ ತಕ್ಕ ಮಾರ್ಗವನ್ನು ತೋರಲೀತೋರಿಸುವನು. ತಂದೆ ಯವರಿಗೆ ಆಲೋಚನೆಗೆ ಸ್ವಲ್ಪ ಅವಕಾಶವನ್ನು ಕೊಡು

ಕಬೀರ—ಪ್ರಿಯೇ ! ನನಗೆ ಇದಕ್ಕೆ ಯಾವ ಮಾರ್ಗವೂ ತೋರಲಿಲ್ಲ. ಈಗ ನಮಗೆ ಸಾಲಸೋಲಗಳು ಹುಟ್ಟುವಂತೆಯಿಲ್ಲ. ಯಾಚನೆಯಿಂದ ತರ ಲವಕಾಶವಿಲ್ಲ. ಆದಕಾರಣ ಕಳ್ಳತನದಿಂದಲಾದರೂ ಪದಾರ್ಥಗಳ ನ್ನೊದಗಿಸಿಕೊಂಡು ಬರಬೇಕು.

ಕಮಾಲ್—ಅಪ್ಪಾ ! ಹಾವನ್ನು ಕೊಂದು ಹದ್ದಿಗೆ ಹಾಕಿದಂತೆ ಇದು ಯಾವ ಧರ್ಮ ? ಒಬ್ಬನಲ್ಲಿ ಕದ್ದು ಅವನಿಗೆ ನಷ್ಟಮಾಡಿ ಈ ಸಾಧುಗಳಿಗೆ ಆತಿಥ್ಯಮಾಡಿದರೆ ಆ ಪಾಪವನ್ನೂ ಈ ಪುಣ್ಯವನ್ನೂ ಏಕಕಾಲದಲ್ಲಿ ಆರ್ಜಿಸಿದಂತಾಗುವುದಲ್ಲಾ ! ಇದು ನ್ಯಾಯವೇ ?

ಕಬೀರ—ಮಗೂ! ಕಮಾಲ್! ನೀನು ಹೇಳುವುದು ನ್ಯಾಯವಾದರೂ ಈ ಕಾಲದಲ್ಲಿ ಧರ್ಮಸೂಕ್ಷ್ಮವನ್ನಾಲೋಚಿಸಬೇಕು. ಕಳ್ಳತನವು ಪಾಪಕರವಾದರೂ ಸ್ವಪ್ರಯೋಜನಕ್ಕಾಗಲಿ, ಮತ್ತೊಬ್ಬನಿಗೆ ನಷ್ಟವನ್ನುಂಟುಮಾಡುವ ದುರಭಿಪ್ರಾಯದಿಂದಾಗಲಿ, ದುರಾಶೆಯಿಂದಾಗಲಿ, ದುಷ್ಟಕಾರ್ಯಕ್ಕೋಸ್ಕರವಾಗಲಿ, ನಾವು ಕಳ್ಳತನವನ್ನು ಮಾಡುವುದಿಲ್ಲ. ಅಲ್ಲದೆ ಇದರಿಂದ ಮತ್ತೊಬ್ಬನಿಗೆ ಅತಿಯಾಗಿ ನಷ್ಟವಾಗುವುದೂ ಇಲ್ಲ; ಕದ್ದ ವಸ್ತುಗಳನ್ನು ಸಾಧುಗಳ ಸೇವೆಗಾಗಿ ಮಾತ್ರವೇ ನಾವು ಉಪಯೋಗಿಸುವುದರಿಂದ ಕಳೆದುಕೊಂಡವನಿಗೂ ಸಾಧುಸೇವೆಯ ಪುಣ್ಯವುಂಟಾಗುವುದು. ಅವನಿಗೆ, ಪುಣ್ಯವನ್ನೊದಗಿಸದ ಸುಕೃತವೂ ಸಾಧುಸೇವೆಯ ಫಲವೂ ನಮಗೆ ಲಭಿಸುವುದು. ಆದರಿಂದ ದೇವರು ನಮ್ಮನ್ನು ಅಪರಾಧಿಗಳೆಂದೆಣಿಸಲಾರನು, ಆದಕಾರಣ. ನಾವು ಈ ರಾತ್ರಿ ಊರಿನಲ್ಲಿಹೊರಟು ಮೂರುಮಂದಿ ಸಾಧುಗಳ ಆತಿಥ್ಯಕ್ಕೆ ತಕ್ಕಷ್ಟು ಪದಾರ್ಥಗಳನ್ನು ಮಾತ್ರ ತರೋಣ.

ಕಮಾಲ್—ಅಪ್ಪಾ! ನೀನು ಹೇಳುವುದು ಯುಕ್ತಿ ಸಮಾಧಾನವೋ? ಅಥವಾ ಶಾಸ್ತ್ರಸಮ್ಮತವೋ?

ಕಬೀರ—ಮಗೂ! ಇದು ಯುಕ್ತಿ ಸಮಾಧಾನವಲ್ಲ; ಕೇಳು.

ಶ್ಲೋ॥ ಯಸ್ಯನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ॥
ಹತ್ವಾಪಿ ಸ ಇಮಾಂ ಲೋಕಾನ್ನ ಹಂತಿ ನನಿಬಧ್ಯತೇ ॥

ಎಂದರೆ ನಾನು ನನ್ನದು, ಎಂಬ ಅಹಂಕಾರವನ್ನು ಬಿಟ್ಟು, ಯಾವನು ಕರ್ಮವನ್ನು ಮಾಡುವನೋ ಅವನು ಈ ಲೋಕವೆಲ್ಲವನ್ನೂ ಕೊಂದರೂ ಆ ಕರ್ಮದಿಂದ ಅವನು ಬದ್ಧನಾಗಲಾರನು, ಅಲ್ಲದೆ;

ಶ್ಲೋ॥ ನಿರಾಶೀರ್ಯತ ಚಿತ್ತಾತ್ಮಾ ತ್ಯಕ್ತ ಸರ್ವಪರಿಗ್ರಹಃ।
ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ ॥

ಎಂದರೆ "ಫಲದಾಸೆಯನ್ನು ತೊರೆದು ಚಿತ್ತನಿಯವನ್ನು ಮಾಡಿರುವ ಸರ್ವತ್ರ ಸಮಬುದ್ಧಿಯುಳ್ಳ ಮನುಷ್ಯನು ಶರೀರ ಸಂಬಂಧವಾದ ಕರ್ಮಗಳನ್ನು ಮಾಡುತ್ತಿದ್ದರೂ ಪಾಪಕ್ಕೆ ಪಾತ್ರನಾಗಲಾರನು" ಎಂದು ಶ್ರೀಕೃಷ್ಣ ಪರಮಾತ್ಮನು "ಗೀತೆ" ಯಲ್ಲಿ ಅರ್ಜುನನಿಗೆ ಉಪದೇಶಮಾಡಿದ್ದಾನೆ. ಹೀಗಿ

ರುವಲ್ಲಿ, ಆತ್ಮಾಭಿಮಾನವಿಲ್ಲದೆ ಸ್ವಪ್ರಯೋಜನವನ್ನು ತೊರೆದ ನಮಗೆ, ಸಾಧುಗಳ ರೂಪದಲ್ಲಿ ಬಂದಿರುವ ಶ್ರೀರಾಮಚಂದ್ರನ ಸೇವೆಗಾಗಿ ದೈವ ಸಂಕಲ್ಪದಿಂದಲೇ ಒದಗಿದ ಈ ಕಾರ್ಯದಲ್ಲಿ ಎಂದಿಗೂ ಪಾಪವು ಘಟಿಸಲಾರದು. ಹೇಗೆಂದರೆ, ಹಿಂದೆ ಧರ್ಮಾತ್ಮರಾದ ದೇವತೆಗಳನ್ನು ಕಾಪಾಡಲು ಶ್ರೀಮನ್ಮಹಾವಿಷ್ಣುವು ತಾನು ಘೋರರೂಪದ ರಾಕ್ಷಸರನ್ನು ಮರೆಮಾಚಿ ಹೋಗಿ ತ್ರಿಪುರಾಸುರ ನಗರದಲ್ಲಿ ಅಮೃತ ಸರೋವರದಲ್ಲಿಯ ಅಮೃತವೆಲ್ಲವನ್ನೂ ಪಾನಮಾಡಿ ಕಡೆಗೆ ಆ ದೈತ್ಯರು ಹತರಾಗುವಂತೆ ಮಾಡಿದುದು ಲೌಕಿಕ ದೃಷ್ಟಿಯಿಂದ ಕಳ್ಳತನವಾಗಿ ಕಾಣುವುದಿಲ್ಲವೇ ? ವಾಮನಾಕಾರದಿಂದ ಬಂದು ಬಲಿಚಕ್ರವರ್ತಿಯಿಂದ ಮೂರು ಹೆಜ್ಜೆಗಳಷ್ಟು ಭೂಮಿಯ ದಾನವನ್ನು ಪಡೆದು ಕಡೆಗೆ ತ್ರಿವಿಕ್ರಮನಾಗಿ ಭೂಮ್ಯಾಕಾಶಗಳನ್ನು ಆಕ್ರಮಿಸಿ ಬಲಿಯನ್ನು ರಸಾತಲಕ್ಕೆ ತುಳಿದುದು ಅಧರ್ಮವಾಗಿ ತೋರುವುದಿಲ್ಲವೇ ? ಶ್ರೀಕೃಷ್ಣಪರಮಾತ್ಮನು ಧರ್ಮಾತ್ಮರಾದ ಪಾಂಡವರ ಜಯಕ್ಕಾಗಿ ಭೀಷ್ಮ ದ್ರೋಣ ಜಯದ್ರಥಾದಿಗಳ ಪರಾಭವವನ್ನು ಮಾಡಿಸಿದುದು ಮೋಸದಿಂದಲೆಂದು ಸಾಮಾನ್ಯರಿಗೆ ಗೋಚರವಾಗುವುದಿಲ್ಲವೇ ? ಕರ್ಣನ ಬಳಿಗೆ ಬ್ರಾಹ್ಮಣರೂಪದಿಂದ ಬಂದು ದೇವೇಂದ್ರನು ಕರ್ಣಕುಂಡಲಗಳನ್ನು ಪಡೆದು ಅವನ ತೇಜಸ್ಸನ್ನು ಕುಂದಿಸಿದುದು ಕಳ್ಳತನದಂತೆ ಕಾಣುವುದಿಲ್ಲವೇ ? ಈ ಎಲ್ಲ ವಿಚಾರಗಳಲ್ಲಿಯೂ ಧರ್ಮಪರಿಣಾಮವೇ ಪ್ರಬಲವಾಗಿರುವ ಕಾರಣ ಅವುಗಳು ಅಧರ್ಮಗಳಾಗಲಿಲ್ಲ, ಈ ಧರ್ಮಸೂಕ್ಷ್ಮ ಪರಿಶೀಲನೆಯಿಂದ, ನಿಸ್ಪೃಹರಾಗಿ ಸಾಧುಸೇವೆ ಮಾಡುವ ನಮಗೆ ಈ ಸೇವೆಯಲ್ಲಿ ಪಾಪದ ಲೇಶವೂ ಇಲ್ಲವೆಂದು ನಾನು ಧಾರಾಳವಾಗಿ ಹೇಳಬಲ್ಲೆನು, ಆದುದರಿಂದ ನೀನು ಸಂದೇಹಪಡಬೇಡ, ಈ ಕಾರ್ಯಕ್ಕೆ ನಾವು ಕಾರಣರಲ್ಲ ; ಪ್ರೇರಕನೂ, ಸಹಾಯಕನೂ, ಅನುಮೋದಕನೂ, ಕರ್ತನೂ ಫಲಾನುಭವಿಯೂ ಸಹ ಆ ಶ್ರೀರಾಮಚಂದ್ರನು ; ಅಹಂಕಾರವನ್ನು ಬಿಟ್ಟು ಆತನ ಕೈಯೊಳಗಿನ ಬೊಂಬೆಗಳಂತಿರುವ ನಮಗೆ ಈ ವಿಚಾರದಲ್ಲಿ ಪಾಪವೇ ಇಲ್ಲ. ಬಾ ಹೋಗುವ.

**ಕಮಾಲ್**—ತಂದೆಯೇ ! ಈಗ ನನಗೆ ಸಂದೇಹ ನಿವಾರಣೆಯಾಯಿತು.

**ಕಬೀರ**—ಪ್ರಿಯೇ ! ನೀನು ಚಿಂತೆಯನ್ನು ಬಿಡು. ನಾನೂ ಕಮಾಲನೂ ಹೋಗಿ ಅತಿಥಿಸತ್ಕಾರಕ್ಕೆ ತಕ್ಕ ಪದಾರ್ಥಗಳನ್ನು ತರುವೆವು.

**ಬೀಬಿ**—ಸಂತೋಷ. (ಕಬೀರನೂ ಕಮಾಲನೂ ಹೋಗುವರು.)

ದೃಶ್ಯ ೪ (ರಾತ್ರಿ ಕಬೀರ ಕಮಾಲರು ಕಳ್ಳತನಕ್ಕೆ ಹೊರಡವರು.)

ಕಬೀರ-ಮ|| ದಹಿಸಿಟ್ಟಂ ಸ್ಮರನಂ ಶಿವಂ, ವಿಜಯನಂದಾಖಾಂಡವಾರ
ಣ್ಯವಂ | ದಹಿಸಿಟ್ಟಂ, ಹನುಮಂತನಂತು ದಶಕಂಠಾ
ವಾಸಮಂ ಲಂಕೆಯಂ || ದಹಿಸಿಟ್ಟಂ, ಜನಕೋಟಿಯುಂ
ದಹಿಸುತಿರ್ಪೀ ದುಷ್ಟ ದಾರಿದ್ರ್ಯಮಂ | ದಹಿಪಾಶೂರನ
ದಾವನುಂ ಭುವನದೊಳ್ ತಾಂ ಪುಟ್ಟಲಿಲ್ಲಕ್ಕಟಾ ! ||

ಆಹಾ ! ದಾರಿದ್ರ್ಯವೇ ! ನಿನ್ನ ಶಕ್ತಿಯು ಬಹು ಪ್ರಬಲವಾದುದು; ನಿಸ್ಪೃಹರನ್ನೂ ನಿಂದ್ಯಕೃತ್ಯಗಳನ್ನು ಮಾಡಲು ಬಲಾತ್ಕರಿಸುತ್ತಿರುವ ನಿನ್ನ ಮಹಿಮೆಯು ಅದ್ಭುತವಾದುದು. ಅಯ್ಯೋ ! ಪಾಪಿ ದಾರಿದ್ರ್ಯವೇ ! ಲೋಕದಲ್ಲಿ ಎಷ್ಟು ಜನರನ್ನು ಬಾಧಿಸಿ ಪರಗೃಹದಾಸರನ್ನಾಗಿ ಮಾಡಿರುವೆ ? ಎಷ್ಟು ಜನರನ್ನು ಆಹಾರವಿಲ್ಲದೆ ಕೊಲ್ಲುತ್ತಿರುವೆ ! ಎಷ್ಟು ಜನರಿಂದ ಪಾಪಕಾರ್ಯಗಳನ್ನು ಮಾಡಿಸುತ್ತಿರುವೆ ! ಎಷ್ಟುಮಂದಿ ಸತ್ಪುರುಷರ ಆನಂದವನ್ನು ಸುಡುತ್ತಲಿರುವೆ ? ಅಯ್ಯೋ ! ಇಂಥ ಲೋಕಕಂಟಕನಾದ ನಿನ್ನನ್ನು ಸುಟ್ಟು ಭಸ್ಮಮಾಡತಕ್ಕವರು ಯಾರೂ ಇಲ್ಲವೇ ? ಇಲ್ಲ ! ಇಲ್ಲ ! ಹಾಗೆ ಇದ್ದಿದ್ದ ಪಕ್ಷದಲ್ಲಿ, ತ್ರಿಲೋಕವಿಜಯಿಯಾದ ಮನ್ಮಥನನ್ನು ಸುಟ್ಟ ಶಿವನೂ ಅದ್ಭುತವಾದ ಖಾಂಡವವನವನ್ನು ಸುಟ್ಟ ಅರ್ಜುನನೂ, ಮಹಾ ಲಂಕಾನಗರವನ್ನು ಸುಟ್ಟ ಆಂಜನೇಯನೂ ನಿನ್ನನ್ನು ಸುಡದೆ ಬಿಡುತ್ತಿದ್ದರೇ ! ಆಹಾ ! ಇವರೆಲ್ಲರಿಗಿಂತಲೂ ನೀನು ಪ್ರಬಲನಲ್ಲವೇ ? ನಿನ್ನ ಕಟಾಕ್ಷವು ಬಿದ್ದ ಮಾತ್ರದಿಂದಲೇ ಪುರುಷನ ಪೌರುಷವೂ, ತೇಜಸ್ಸೂ, ಶಕ್ತಿಯೂ, ಸಂತೋಷವೂ ಮಾಯವಾಗಿ ಅವನು ದೀನನೂ ಕಾಂತಿಹೀನನೂ, ದುರ್ಬಲನೂ, ದುಃಖಿಯೂ ಆಗಿ ಜನರಿಂದ ತುಚ್ಛವಾಗಿ ಕಾಣಲ್ಪಡುವನು. ಆಹಾ ! ಅತಿಥಿಸತ್ಕಾರಕ್ಕೂ ದೇವತಾಸೇವೆಗೂ ಪುಣ್ಯಕರ್ಮಗಳಿಗೂ ಪ್ರತಿಬಂಧಕನಾದ ನೀನಲ್ಲವೇ ಮನುಷ್ಯರ ಪಾಪಾರ್ಜನೆಗೆ ಪ್ರಬಲಕಾರಣನು ! ವಿಧಿಯೇ ! ಶ್ರೀರಾಮಚಂದ್ರನ ಭಕ್ತನಾದ ನನ್ನನ್ನೂ ಈ ಕ್ರೂರವಾದ ಬಡತನದ ವಶಮಾಡಿ ಪರೀಕ್ಷಿಸಿದೆಯಾ ? ಆಗಲಿ. ಪರೀಕ್ಷಿಸು, ಸ್ವಸುಖಾಭಿಮಾನವನ್ನು ಬಿಟ್ಟಿರುವ ನಾನು ಹೆದರುವವನಲ್ಲ. ನಾನು ಮಾಡತಕ್ಕ ಕಳ್ಳತನದ ಫಲವು ಈ ಸಂಧಿಯನ್ನೊಡಗಿಸಿದ ಶ್ರೀರಾಮಚಂದ್ರನಿಗೇ ಸೇರಿದುದು. ಮಗೂ ! ಕಮಾಲ್ ! ಈಗ

ನಿಶ್ಶಬ್ದವಾಗಿರುವುದು ! ನಾವು ನಗರ ರಕ್ಷಕರಿಗೆ ಗೋಚರವಿಲ್ಲದೆ ಸರಿಯಾದ ಸ್ಥಳಕ್ಕೆ ಹೋಗಿ ನಮ್ಮ ಸಾಧುಗಳ ಅತಿಥ್ಯಕ್ಕೆ ತಕ್ಕಷ್ಟು ಪದಾರ್ಥಗಳನ್ನು ಮೆಲ್ಲನೆ ಕದ್ದು ತರಬೇಕು. ಎಲ್ಲಿ ಹೋಗೋಣ ?

**ಕಮಾಲ್**—ಅಪ್ಪಾ ! ನೀನು ಆಗಾಗ ಹೇಳುತ್ತಿರಲಿಲ್ಲವೆ ! ಆ ವೆಂಕಟಯ್ಯ ಸೆಟ್ಟಿಯು ಆಹಾರಪದಾರ್ಥಗಳ ಅಂಗಡಿಯನ್ನು ಇಟ್ಟಿರುವನೆಂದು ಆತನ ಮನೆಗೆ ಹೋದರೆ ಎಲ್ಲ ಪದಾರ್ಥಗಳೂ ಒಂದೇ ಕಡೆಯಲ್ಲಿ ಸಿಕ್ಕ ಬಹುದು.

**ಕಬೀರ**—ನಿಜ, ನಿಜ ! ಅಲ್ಲಿಗೇ ಹೋಗೋಣ. ಬಾ.

೨೧೮|| ರಾಮಾ ವರರಘುವಂಶ ಲ |
ಲಾಮಾ ಸೋಮುನಲಾರ್ಕ್ಯಧಾಮಾ ಮಹಿಮೋ ||
ದ್ದಾಮಾ ರಕ್ಷಸು ಮಂಗಳ |
ನಾಮಾ ಜನಕಾತ್ಮಜಾಕ್ಷಿ ಕೈರವಸೋಮಾ ||೧೮|| (ಹೋಗುವರು)

ದೃಶ್ಯ ೫ (ವೆಂಕಟಯ್ಯ ಸೆಟ್ಟಿಯ ಮನೆಯ ಮುಂದೆ.)

**ಕಬೀರ**—(ಮನೆಯನ್ನು ನೋಡಿ) ಇದೋ ! ದೀಪಗಳನ್ನಾರಿಸಿ ಎಲ್ಲರೂ ನಿಶ್ಶಬ್ದವಾಗಿ ಗಾಢನಿದ್ರೆಯಲ್ಲಿರುವರು ಕನ್ನವನ್ನು ಹಾಕೋಣವೇ ?

**ಕಮಾಲ್**—ಅಪ್ಪಾ ! ಕನ್ನವನ್ನು ಹಾಕಲು ಹೊತ್ತಾಗುವುದು. ಅದಕ್ಕಿಂತಲೂ ಉಪಾಯವಾಗಿ ಈ ಕಿಟಕಿಯ ಕಂಬಿಗಳನ್ನು ಕಿತ್ತುಬಿಟ್ಟರೆ ಸುಲಭವಾಗಿ ಒಳಗೆ ಹೋಗಬಹುದಲ್ಲವೆ ?

**ಕಬೀರ**—ನಿಜ ! ನಿಜ ! ಅದೂ ಒಳ್ಳೆಯ ಉಪಾಯವೇ ! ಆದರೆ ಕಿಟಕಿಯು ಬಹಳ ಚಿಕ್ಕದಲ್ಲಾ ! ನಾನು ಪ್ರವೇಶಿಸಲಾಗುವುದೇ ?

**ಕಮಾಲ್**—ನಾನು ಪ್ರವೇಶಿಸುವೆನು ; ನೀನೇ ಹೊರಗಿರು.

**ಕಬೀರ**—ಆಗಬಹದು; ಕೂಗಬೇಡ; ಕಂಬಿಗಳನ್ನು ಕೀಳುವೆನು. (ಕಿಟಕಿಯ ಕಂಬಿಗಳನ್ನು ಕೀಳುವನು.) ಕಮಾಲ್ ! ಇದೋ ! ಎರಡು ಕಂಬಿಗಳನ್ನು ಕಿತ್ತಿರುವೆನು,

**ಕಮಾಲ್**—ಸರಿ ! ಇನ್ನು ಕಳ್ಳತನಮಾಡಿ ಕಂಬಿ ಕೀಳೋಣ. ನನ್ನನ್ನು ಎತ್ತಿ ಒಳಗೆ ಕಳುಹಿಸು.

ಕಬೀರ—ಹಾಗೆಯೇ ಆಗಲಿ. ಬಾ! ಮೊದಲು ನೀನು ಮೆಲ್ಲನೆ ಪದಾರ್ಥಗಳಿರುವ ಸ್ಥಳವನ್ನು ನೋಡಿ ಅವುಗಳನ್ನು ತೆಗೆದುಕೊಂಡು ಒಂದು ಗಂಟನ್ನು ಕಟ್ಟಿ ನನ್ನ ವಶಕ್ಕೆ ಕೊಡು ಅನಂತರ ನಿನ್ನನ್ನು ನಾನು ಹೊರಕ್ಕೆ ಎಳೆದುಕೊಳ್ಳುವೆನು.

ಕಮಾಲ್—ಹಾಗೆಯೇ ಆಗಲಿ, ಯಾವಯಾವ ಪದಾರ್ಥವನ್ನೆಷ್ಟೆಷ್ಟು ತೆಗೆದುಕೊಳ್ಳಬೇಕು?

ಕಬೀರ—ಅಳತೆಯ ಸೇರು, ಪಾವು, ಆ ಅಂಗಡಿಯಲ್ಲಿಯೇ ಇರುವುವು; ಮೂರುಮಂದಿಯ ಊಟಕ್ಕೆ ಆಗುವಷ್ಟು ಪದಾರ್ಥಗಳನ್ನು ಮಾತ್ರವೇ ಅಳೆದು ತರಬೇಕಲ್ಲದೆ ಒಂದು ಎಳ್ಳಷ್ಟನ್ನಾದರೂ ಹೆಚ್ಚಾಗಿ ತರಕೂಡದು.

ಕಮಾಲ್—ಅದೆಷ್ಟೆಷ್ಟು? ನನಗೆ ಗೊತ್ತಿಲ್ಲವಲ್ಲಾ!

ಕಬೀರ—ಮೂರುಮಂದಿಗೆ ಮೂರು ಪಾವು ಅಕ್ಕಿ, ಒಂದೂವರೆ ಪಾವು ಬೇಳೆ, ಮೂರು ಪಾವು ತುಪ್ಪ, ಒಂದೂವರೆ ಪಾವು ರವೆ, ಒಂದು ಸೇರು ಸಕ್ಕರೆ, ಒಂದು ಸಣ್ಣ ಉಂಡೆ ಹುಣಿಸೆಯಹಣ್ಣು, ಅರಪಾವು ಉಪ್ಪು, ಒಂದು ಹಿಡಿ ಮಣಸಿನಕಾಯಿ, ಒಂದು ತೆಂಗಿನಕಾಯಿ, ಸ್ವಲ್ಪ ಸಾಸಿವೆ, ಇಷ್ಟನ್ನು ಮಾತ್ರ ತೆಗೆದುಕೊ. ಹೆಚ್ಚಾಗಿ ತೆಗೆದುಕೊಂಡೀಯೆ! ಮಲಗಿರುವವರನ್ನು ಕಾಣದೆ ತುಳಿದೀಯೆ? ಅನರ್ಥವಾದೀತು! ಎಚ್ಚರಿಕೆ!

ಕಮಾಲ್—ಆಗಲಿ (ಕಬೀರನು ಕಮಾಲನನ್ನು ಒಳಗೆ ಇಳಿಸುವನು.)

ಕಬೀರ—ಶ್ರೀರಾಮಚಂದ್ರಾ! ಈ ನಮ್ಮ ಕಾರ್ಯವನ್ನು ನಿರ್ವಿಘ್ನವಾಗಿ ನಡೆಯಿಸಿ ನಮ್ಮ ಅತಿಸತ್ಕಾರದ ಕಾರ್ಯವನ್ನು ಸಾರ್ಥಕಗೊಳಿಸಬೇಕು (ಒಂದುಕಡೆ ಅವಿತುಕೊಳ್ಳುವನು.)

ಕಮಾಲ್—(ಕಿಟಕಿಯೊಳಗಿನಿಂದ ಗಂಟನ್ನು ಹಿಡಿದು) ಅಪ್ಪಾ! ಇದೋ! ತೆಗೆದುಕೋ.

ಕಬೀರ—(ಸಂತೋಷದಿಂದ) ಸಂತೋಷ ಕೊಡು. (ತೆಗೆದುಕೊಂಡು) ಬಾ ಇನ್ನು ಹೋಗೋಣ. (ಕಮಾಲನನ್ನಿಳಿಸುವನು, ಕಮಾಲನೂ ಕಬೀರನೂ ಸ್ವಲ್ಪದೂರ ಬರುವರು.)

ಕಮಾಲ್—ಅಪ್ಪಾ ! ಅಪ್ಪಾ ! ಈಗ ನನಗೊಂದು ಅನುಮಾನವು ಬಂದು ಬಿಟ್ಟಿದೆಯಲ್ಲಾ !

ಕಬೀರ—ಏನು ಮಗೂ ಅಂತಹ ಅನುಮಾನವು ?

ಕಮಾಲ್—ಮತ್ತೇನೂ ಇಲ್ಲ ! ಕಳ್ಳತನವು ಕೆಟ್ಟುದೆಂಬುದಕ್ಕೆ ಈ ಕಾಲದಲ್ಲಿ ಈ ರೀತಿಯಾಗಿ ಕದಿಯಬಹುದೆಂದು ನೀನೇನೋ ಸಮಾಧಾನವನ್ನು ಹೇಳಿಬಿಟ್ಟೆ ; ಅದರಿಂದ ನಮಗೇನೋ ಪಾಪವಿಲ್ಲ ಅದಿರಲಿ ; ಈಗ ನಾವು ಈ ಕಿಟಕಿಯ ಕಂಬಿಗಳನ್ನು ಕಿತ್ತು ಹಾಕಿ ಹೋಗುತ್ತಿರುವೆವಲ್ಲಾ ! ಇದನ್ನು ನೋಡಿಕೊಂಡು ಯಾವನಾದರೂ ನಿಜವಾದ ಕಳ್ಳನು ಈ ಮನೆಯೊಳಗೆ ನುಗ್ಗಿ ಆ ಪುಣ್ಯವಂತನ ಮನೆಯಲ್ಲಿರುವ ಐಶ್ವರ್ಯವನ್ನು ಅಪಹರಿಸಿಕೊಂಡು ಹೋದರೆ ಆ ಪಾಪವು ಯಾರಿಗೆ ?

ಕಬೀರ—ಸರಿ ! ಸರಿ ! ನ್ಯಾಯವಾದ ಪ್ರಶ್ನೆಯು ! (ಆಲೋಚಿಸಿ) ಮಗೂ ಆ ಕಳ್ಳತನಕ್ಕೆ ಮಾರ್ಗವನ್ನು ಮಾಡಿಕೊಟ್ಟ ನಮಗೆತಾನೇ ಆ ಪಾಪವು ಘಟಿಸುವುದು !!

ಕಮಾಲ್—ಆದರೆ ನಾವು ಅತಿಥಿ ಸತ್ಕಾರಕ್ಕೆ ಮಾತ್ರವೇ ಪದಾರ್ಥಗಳನ್ನು ತೆಗೆದುಕೊಂಡ ನ್ಯಾಯವೇನಾಯಿತು ?

ಕಬೀರ—ನಿಜ ! ಒಳ್ಳೆಯ ಧರ್ಮಸಂಕಟ ವೊದಗಿತೇ ? ಏನು ಮಾಡುವ ?

ಕಮಾಲ್—ಅಪ್ಪಾ ! ನನಗೊಂದುಪಾಯವು ತೋರುವುದು. ಏನೆನ್ನು ವೆಯೋ ? ನಾನು ಕಿಟಕಿಯಿಂದ ಮತ್ತೆ ಒಳಗಿಳಿದು ಹಿಂದುಗಡೆಯಲ್ಲಿ ನಿದ್ರಿಸುತ್ತಿರುವ ಆ ಸೆಟ್ಟಿಯನ್ನೆಬ್ಬಿಸಿ ಓಡಿಬರುವೆನು

ಕಬೀರ—ಸರಿ ! ಉಪಾಯವೇನೋ ಸರಿಯೇ ! ಒಂದುವೇಳೆ ನೀನು ಅವರ ಕೈಗೆ ಸಿಕ್ಕಿಬಿದ್ದರೆ ಗತಿಯೇನು ?

ಕಮಾಲ್—ನಾನೆಂದಿಗೂ ಸಿಕ್ಕಲಾರೆನು ; ಬೇಗನೆ ಓಡಿಬಂದು ಧುಮ್ಮಿಕ್ಕಿ ಬಿಡುವೆನು

ಕಬೀರ—ಹಾಗೆಯೇ ಮಾಡು. ಒಳಕ್ಕೆ (ಇಳಿಸುವನು)

ಕಮಾಲ್—(ಒಳಗೆ) ಸೆಟ್ಟರೇ ! ವೆಂಕಟಯ್ಯ ಸೆಟ್ಟರೇ ! ಏಳಿ, ಏಳಿ, ನಿಮ್ಮ ಮನೆಯ ಪದಾರ್ಥಗಳನ್ನೆಚ್ಚರದಿಂದ ನೋಡಿಕೊಳ್ಳಿ. ಏಳಿ, ಏಳಿ.

(ಒಳಗೆ)-ಮಾವಾ, ಮಾವ! ಏಳಿ! ಏಳಿ!! ಯಾರೋ ಕಳ್ಳರು ಬಂದಿರುವಂತೆ ಕಾಣುವುದು ಏಳಿ! ಅಯ್ಯೋ! ಇನ್ನೇನುಗತಿ!! ಎಲೆ! ಎಲೆ! ಏಳು! ಏಳು! ದೀಪ ಹಚ್ಚು! ಇದೋ! ಇದೋ! ಕಿಟಕಿಯಲ್ಲಿ ನುಗ್ಗುವನು, ಮಾವಾ, ಹಿಡಿ! ಕಾಲನ್ನು ಹಿಡಿ!!

**ಕಮಾಲ್**—ಅಯ್ಯೋ! ಅಪ್ಪಾ! ಅಪ್ಪಾ! ನನ್ನ ಕಾಲನ್ನು ಹಿಡಿದುಕೊಂಡಿರುವರು ಬರಲಾರೆನು. ನನ್ನನ್ನು ಮೊದಲು ಹೊರಕ್ಕೆಳೆದುಕೋ ಎಳೆದುಕೋ. (ಕಿಟಕಿಯಲ್ಲಿ ತಲೆಯಿಡುವನು.)

**ಕಬೀರ**—ಅಯ್ಯೋ! ಗ್ರಹಚಾರವೇ! ಕಡೆಗೂ ಸಿಕ್ಕಿಬಿದ್ದನಲ್ಲಾ! ಮುಂದೆ ಗತಿಯೇನು? ಅಯ್ಯೋ! ಕಮಾಲ್. (ಎಳೆಯುತ್ತ) ಅಯ್ಯೋ! ನಾನು ಎಳೆಯಲಾರೆನು. ಅವರು ನಿನ್ನನ್ನು ಬಲವಾಗಿ ಹಿಡಿದಿರುವರು.

**ಕಮಾಲ್**—ಅಪ್ಪಾ! ಈಗ ನೀನು ಮಾತ್ರ ಬಿಡಬೇಡ. ಸಾಧುಗಳ ಆತಿಥ್ಯಕ್ಕೆ ಭಂಗಬರುವುದು! ಅದರಿಂದ ನನ್ನ ಪ್ರಾಣ ಹೋದರೂ ಚಿಂತೆಯಿಲ್ಲ, ನನ್ನ ಗುರ್ತು ತಿಳಿಯದಂತೆ ಮೊದಲು ನನ್ನ ಕುತ್ತಿಗೆಯನ್ನು ಕೊಯ್ದುಕೊಂಡು ಹೋಗು. ನಾನಿಂಥವನೆಂದು ತಿಳಿದರೆ ನೀನು ಕಷ್ಟಕ್ಕೆ ಸಿಕ್ಕಿ ಅತಿಥಿಸತ್ಕಾರವು ಕೆಡುವುದು, ಅದರಿಂದ ತ್ವರೆಮಾಡು ತ್ವರೆಮಾಡು!! ಅಯ್ಯೋ! ಎಳೆಯುವರು! ಬಹಳ ಸಂಕಟವಾಗುವುದು! ಮೊದಲು ನನ್ನ ತಲೆಯನ್ನು ಕಡಿದುಕೊ; ಸಾವಕಾಶ ಮಾಡತಕ್ಕದ್ದಲ್ಲ. ಅಭಿಮಾನವನ್ನು ಬಿಡು, ನೀನು ಜ್ಞಾನಿಯು, ವ್ಯಾಮೋಹದಿಂದ ಅನುಮಾನಿಸಿದರೆ ಅತಿಥಿಸತ್ಕಾರವು ಕೆಡುವುದು. ಮೊದಲು ನನ್ನ ತಲೆಯನ್ನು ಕಡಿದುಕೊಂಡು ಹೋಗು.

**ಕಬೀರ**—ಅಯ್ಯೋ! ಪಾಪಿ ಕಬೀರನೇ! ನಿನಗೆ ಎಂತಹ ಸಂಕಟವೊದಗಿತು. ಈಗ ಮಾಡುವುದೇನು? ಆಲೋಚಿಸಲು ಕಾಲವಿಲ್ಲ. ಕಮಾಲನು ಹೇಳಿದುದೇ ಉಪಾಯ. ಮಮಕಾರವನ್ನೂ ಅಭಿಮಾನವನ್ನೂ ಬಿಟ್ಟು ಸಾಧುಸೇವೆಯನ್ನು ಮಾಡಲೇಬೇಕು; ಅಯ್ಯೋ! ಕುಮಾರನನ್ನು ಹೇಗೆ ವಧಿಸಲಿ! ಯತ್ನವಿಲ್ಲ. ಶ್ರೀರಾಮಾ! ನಿನ್ನ ಸೇವೆಗಾಗಿ ಕುಮಾರನನ್ನು ವಧಿಸುವೆನು. (ಕತ್ತಿಯಿಂದ ಕಮಾಲನ ತಲೆಯನ್ನು ಕತ್ತರಿಸಿಕೊಂಡು ಓಡಿ ಹೋಗುವನು)

ಸ್ಥಳ ೬ (ಕಬೀರನ ಮನೆಯ ಮುಂದೆ)

ಕಬೀರ—(ತಲೆಯನ್ನು ನೋಡಿ ವ್ಯಸನದಿಂದ)

೨೨; ಕಂ|| ಬಾಲಾ ವಿಲಸಿತ ಗುಣಮಣಿ |
ಮಾಲಾ ಶ್ರೀರಾಮ ಪದಯುಗಾರ್ಚನಲೋಲಾ ||
ಲೀಲಾ ವಿಶಾಲ ನಿನ್ನಿಂ |
ಕಾಲನ ವಶನಾದೆಯಲ್ತೆ ! ಮುದ್ದು ಕಮಾಲಾ || ೧೯ ||

ಹಾ ! ಪುತ್ರಾ ! ಕಮಾಲಾ ! ಭಕ್ತಶಿರೋಮಣೀ ! ಸಾಧುಗಳಿಗಾಗಿ ಪ್ರಾಣವನ್ನಿತ್ತೆಯಾ ! ಅಯ್ಯೋ ನಿನ್ನ ಜನ್ಮವನ್ನೀರೀತಿಯಾಗಿ ಸಾರ್ಥಕಮಾಡಿಕೊಂಡೆಯಾ ! ನನಗೆ ಈ ವಿಧವಾದ ಪುತ್ರಶೋಕವನ್ನನುಭವಿಸುವ ಯೋಗವಿತ್ತೇ ? ಹಾ ! ಕಮಾಲ್ ! ಪ್ರಿಯಪುತ್ರಾ ! ಅಯ್ಯೋ ! ನಿಷ್ಕಲ್ಮಷಚಿತ್ತನಾಗಿ ಪರಮದೈವಭಕ್ತನೆನಿಸಿ ನಾನಾ ಕ್ಷೇತ್ರ ತೀರ್ಥಯಾತ್ರೆಗಳನ್ನು ಮಾಡಿ ಪಾಪರಹಿತನಾಗಿದ್ದ ನಿನ್ನನ್ನು ಪರಮಾತ್ಮನು ತನ್ನ ಪಾದಾರವಿಂದಗಳಲ್ಲಿ ಸೇರಿಸಿಕೊಂಡನೇ ! (ತಲೆಯನ್ನು ನೋಡುತ್ತ) ಹಾ ! ಪುತ್ರಾ ! ಈ ನಿನ್ನ ಶಿರಸ್ಸನ್ನು ಹೇಗೆ ನೋಡಲಿ ! ನಿನ್ನ ಮಾತೆಗೆ ಏನನ್ನು ಹೇಳಲಿ ! ನಿನ್ನನ್ನು ನನ್ನ ಕೈಯಿಂದಲೇ ಸಂಹರಿಸಿದೆನೆಂದು ಹೇಳಲೇ ! ಅಯ್ಯೋ ! ಶ್ರೀರಾಮಚಂದ್ರನ ಸಂಕಲ್ಪವು ಈರೀತಿಯಿತ್ತೇ ? ವಿಧಿಯೇ ! ಪಾಪಿ ಕಬೀರನೇ ! ಇಂತಹ ಘೋರಕಾರ್ಯವನ್ನು ಮಾಡಿದೆಯಲ್ಲಾ ! ಹಾ ! ಪುತ್ರಾ ! ಕಮಾಲ ! ಕಮಾಲ !! (ನಿಟ್ಟುಸಿರನ್ನು ಬಿಟ್ಟು ಆಗಲೇ ಜ್ಞಾನವನ್ನು ತಂದುಕೊಂಡು) ಏನಿದು ? ಅಜ್ಞಾನವು ! ದೇಹಾತ್ಮಗಳ ಮತ್ತು ಜನನಮರಣಗಳ ತತ್ವವನ್ನು ಬಲ್ಲ ನಾನು, ಅಜ್ಞನಂತೆ ಹೀಗೆ ಮೋಹಮಗ್ನನಾಗಿ ದುಃಖಿಸಬಹುದೇ ? ಪರಮಾತ್ಮನ ಮಾಯೆಯಿಂದ ಕಲ್ಪಿತವಾದ ಈ ಪ್ರಪಂಚದಲ್ಲಿ ಜೀವರುಗಳು ತಮ್ಮತಮ್ಮ ಕರ್ಮಾನುಸಾರವಾಗಿ ಒಂದು ಉಡಿಗೆಯನ್ನು ತೆಗೆದು ಮತ್ತೊಂದುಡಿಗೆಯನ್ನು ಧರಿಸಿಕೊಳ್ಳುವಂತೆ ಹೊಸಹೊಸ ದೇಹಗಳನ್ನು ಧರಿಸುತ್ತಿರುವರು. ಸಂಸ್ಕಾರವಿಶೇಷದಿಂದ ಅವರಲ್ಲಿ ಭಕ್ತಿಜ್ಞಾನಗಳುಂಟಾಗುವುವು. ಅವುಗಳನ್ನು

ಸತ್ಕರ್ಮದಿಂದಲೂ ಪರಮಾತ್ಮನ ಧ್ಯಾನೋಪಾಸನೆಗಳಿಂದಲೂ ವೃದ್ಧಿ ಪಡಿಸಿಕೊಳ್ಳಬು, ಪರಮಾತ್ಮನು ಮನುಷ್ಯನಿಗೆ, ಇತರ ಪ್ರಾಣಿಗಳಿಗಿಲ್ಲ ದಿರುವ ಬುದ್ಧಿ ವಿವೇಕ ವಚನ ಶಕ್ತಿಗಳನ್ನೂ, ಕಾರ್ಯಕರಣ ಸಾಧಕ ಗಳಾದ ಇಂದ್ರಿಯಗಳನ್ನೂ ಸಹ ಕೊಟ್ಟಿರುವನು. ಅದರಿಂದ ಸಕ ಲೇಂದ್ರಿಯ ಗಳನ್ನೂ ಪರಮಾತ್ಮನ ಆರಾಧನೆಯಲ್ಲಿ ಉಪಯೋಗಿಸಿ, ಕಡೆಗೆ ಜನ್ಮರಹಿತನಾಗುವುದೇ ನಿಜವಾದ ಮುಕ್ತಿಯು. ಅದನ್ನು ಬಿಟ್ಟು ಅಜ್ಞಾನಿಗಳು ಮಿಥ್ಯಾಪ್ರಪಂಚದ ಅಸ್ಥಿರವಾದ ಸುಖಭ್ರಾಂತಿ ಯನ್ನೇ ಪರಮಾರ್ಥವೂ ಶಾಶ್ವತವೂ ಎಂದು ನಂಬಿ ಆಶಾಪಾಶಬದ್ಧ ರಾಗಿ ಅರಿಷಡ್ವರ್ಗಗಳಿಗೆ ಸಿಕ್ಕಿ ನೊಂದು ಆತ್ಮತತ್ವವನ್ನು ಮರೆತು ಮುಕ್ತಿಮಾರ್ಗವನ್ನು ಕಳೆದುಕೊಳ್ಳುತ್ತಿರುವರಲ್ಲದೆ ಇಹಲೋಕದ ಸುಖದುಃಖಗಳಲ್ಲಿ ಚಿತ್ತವನ್ನಿಟ್ಟು ಕೆಡುತ್ತಿರುವರು ಮರಣವೆಂದರೆ ದೇಹವ್ಯತ್ಯಾಸ ವೊಂದಲ್ಲದೆ ಆತ್ಮಕ್ಕೆ ಮರಣವೆಲ್ಲಿಯದು ? ಈ ದೇಹವು ಶಾಶ್ವತವೇ ? ಮೃಣ್ಮಯವಾದ ಶರೀರಕ್ಕಾಗಿ ವ್ಯಥೆಪಡಬಹುದೇ ! ಸತ್ಕರ್ಮ ಜ್ಞಾನಗಳಿಂದ ಆತ್ಮವು ಕ್ರಮಕ್ರಮವಾಗಿ ಕಲುಷರಹಿತವಾ ಗುವಂತೆ ಪ್ರಯತ್ನಿಸುವುದೇ ಭಕ್ತರ ಕರ್ತವ್ಯವು ಮತ್ತು ಜ್ಞಾನಿಗಳ ಲಕ್ಷಣವು. ಆಹಾರ ನಿದ್ರಾದಿಗಳಿಂದ ಪೋಷಿಸಿ ಅಜ್ಞಾನದಿಂದ ಈ ಪಾರ್ಥಿವದೇಹವೇ ಪ್ರಧಾನವೆಂದು ಅದನ್ನು ಪರಮಾದರದಿಂದ ಸುಖ ಭೋಗಗಳಲ್ಲಿ ಮುಳುಗಿಸಿ ಪೋಷಿಸುವುದರಿಂದ ಫಲವಿಲ್ಲ. ಅದರಲ್ಲಿರುವ ಆತ್ಮವು ಶುದ್ಧವಾಗದೆ ಸ್ಥೂಲದೇಹವು ಆನೆಯಂತೆಯೂ, ಬೆಟ್ಟದಂ ತೆಯೂ ಬೆಳೆದರೂ ಫಲವಿಲ್ಲ. ಅದಕ್ಕೆ ಪ್ರತಿಯಾಗಿ ಈ ಸ್ಥೂಲದೇ ಹದ ಮೂಲಕ ಶ್ರೀರಾಮನಾಮಾಮೃತವನ್ನೆರೆದು ಆ ಸೂಕ್ಷ್ಮದೇಹ ವನ್ನು ಚೆನ್ನಾಗಿ ತೊಳೆದು ವೃದ್ಧಿಗೊಳಿಸಿ ಅದು ಜ್ಞಾನವೆಂಬ ಬೆಳಕಿ ನಲ್ಲಿ ಮುಕ್ತಿಮಾರ್ಗವನ್ನು ಹಿಡಿದು ಹೋಗುವಂತೆ ಮಾಡಲು ಪ್ರಯ ತ್ನಿಸುವುದಾದರೆ ಅಲ್ಪಕಾಲದಲ್ಲಿಯೇ ಸಂಸಾರ ಕಾನನವನ್ನು ದಾಟಿ ನಿಜಸೌಖ್ಯಪ್ರದವಾದ ವೈಕುಂಠ ಲೋಕವನ್ನು ಸೇರಿ ಶಾಶ್ವತಾನಂದ ವನ್ನು ಪಡೆಯಬಹುದು. ಆದಕಾರಣ ಆತ್ಮವು ಪ್ರಧಾನವಲ್ಲದೆ ದೇಹವು ಪ್ರಧಾನವೇ ? ಛೀ ! ಛೀ ! ಮಗನು ಯಾರು ? ತಂದೆ ಯಾರು ? ಕರ್ಮವಿಶೇಷದಿಂದ ಸ್ವಲ್ಪಕಾಲ ಸಂಧಿಸಿದ್ದ ಪ್ರತ್ಯೇಕ ಜೀವ

ರುಗಳೇ ಬಂಧುಬಳಗಗಳು ! ನಾನಾ ದಿಕ್ಕುಗಳಿಂದ ಬಂದ ಪಕ್ಷಿಗಳು ಒಂದು ಮರದಮೇಲೆ ಕುಳಿತಿದ್ದು ಹಾರಿಹೋಗುವಂತೆ ಒಂದು ಸಂಸಾರದಲ್ಲಿ ಹಲವು ಜೀವರುಗಳು ಕೆಲವುಕಾಲ ಬಂದು ನಿಂತಿದ್ದು ಕಾಲಬಂದರೆ ಈ ದೇಹವನ್ನು ತ್ಯಜಿಸುವರು. ಇದಕ್ಕೆ ಪರಸ್ಪರ ವಿರಹವ್ಯಥೆಯೇಕೆ ? ಈ ಮಮಕಾರವೇಕೆ ?

೨೦ ಕಂ|| ದೇಹವಿದಾತ್ಮದ ಮೃಣ್ಮಯ |
ಗೇಹನುಶಾಶ್ವತಮಿದಕ್ಕೆ ಸತಿಸುತರೆಂಬಾ ||
ಮೋಹಮದೇತಕೆ ಮುಕ್ತಿಯು |
ನೈಹಿಕ ಸಂಬಂಧ ಸೌಖ್ಯಮೇಂ ನೀಡುವುದೇ ||೨೦||

(ಹೋಗುವನು.)

ಸ್ಥಾನ ೭ (ಕಬೀರದಾಸನ ಮನೆ.)

ಬೀಬಿ—ಆಳಸಾಧುಗಳ ಆತಿಥ್ಯಕ್ಕಾಗಿ ಪದಾರ್ಥಗಳನ್ನು ಕಳ್ಳತನದಿಂದ ತರುವೆವೆಂದು ಹೋದ ಪ್ರಿಯನೂ ಪುತ್ರನಾದ ಕಮಾಲನೂ ಇನ್ನೂ ಬರಲೇ ಇಲ್ಲ. ಕದಿಯಲು ಹೋದ ಇವರಿಗೆ ನಗರ ರಕ್ಷಕರಿಂದ ಏನಾದರೂ ಅಪಾಯ ಸಂಭವಿಸಿತೋ ? ಕಾಣೆನೇ !

ಕಬೀರ—(ಒಂದು ಕೈಯಲ್ಲಿ ಪದಾರ್ಥಗಳ ಗಂಟನ್ನೂ ಮತ್ತೊಂದು ಕೈಯಲ್ಲಿ ಕಮಾಲನ ರುಂಡದ ಗಂಟನ್ನೂ ತಂದು ಪ್ರವೇಶಿಸುವನು.) ಪ್ರಿಯೇ ! ಸಾಧುಗಳ ಆತಿಥ್ಯಕ್ಕಾಗಿ ಪದಾರ್ಥಗಳನ್ನು ತಂದಿರುವೆನು ತೆಗೆದುಕೋ.

ಬೀಬಿ—ಬಹಳ ಸಂತೋಷ. ಕಮಾಲನೆಲ್ಲಿ ?

ಕಬೀರ—ಹೇಳುವೆನು. ಈ ಪದಾರ್ಥಗಳನ್ನು ಮೊದಲ ಸಾಧುಗಳಿಗೆ ಕೊಟ್ಟುಬಾ.

ಬೀಬಿ—ಹಾಗೆಯೇ ಆಗಲಿ. (ತೆಗೆದುಕೊಂಡುಹೋಗಿ ಕೊಟ್ಟುಬಂದು). ಪ್ರಿಯಾ ! ಎಲ್ಲಿ ? ಕಮಾಲನು ? ಏತಕ್ಕೆ ಬರಲಿಲ್ಲ ?

ದ್ವಿತೀಯಾಂಕಂ.

ಕಬೀರ— ಪ್ರಿಯೇ! ಇದೋ! ನಿನ್ನ ಪುತ್ರನಾದ ಕಮಾಲನು. (ತಲೆಯನ್ನು ತೋರಿಸುವನು.)

ಬೀಬಿ— ಹಾ! ಏನು? ಕಮಾಲನ ತಲೆಯೇ (ಮೂರ್ಛೆಬಿದ್ದು ಮೇಲಕ್ಕೆದ್ದು.) ಅಃ ಹಾ! ವಿಧಿಯೇ! ಇವೇನು ಈ ವಿಪರೀತವು? ಅಯ್ಯೋ! ಪ್ರಿಯಪುತ್ರಾ, ಕಮಾಲಾ! ಅಯ್ಯೋ! ನನ್ನ ಮುದ್ದುಕುಮಾರಾ! ಮೃತನಾದೆಯಾ? ಇನ್ನೇನುಗತಿ! ನನ್ನ ಮೋದಕಂದಾ! ನನ್ನ ಭಾಗ್ಯದನಿಧಿ! ನಿನ್ನನ್ನು ಸಂಹರಿಸಿದವರು ಯಾರು! ಅಯ್ಯೋ! ಏತಕ್ಕೆ ನಿನಗಿಂತಹ ದುರ್ಮರಣವೊದಗಿತು! ನಾನೀ ದುಃಖವನ್ನು ಹೇಗೆ ಸಹಿಸಲಿ! ಇನ್ನು ಈ ಭೂಮಿಯಮೇಲೆ ಹೇಗೆ ಬಾಳಲಿ! ಈ ಪ್ರಾಣವನ್ನು ಹೇಗೆ ಇರಿಸಲಿ!

ಉ॥ ಪೋದುದೆ ನನ್ನ ಮುದ್ದುಗಿಣಿ! ಪೋದುದೆ ನನ್ನಯ ಜೀವರತ್ನಮೇಂ।
ಪೋದುದೆ ನನ್ನ ಭಾಗ್ಯನಿಧಿ! ಪೋದುದೆ ನನ್ನಯ ಕಲ್ಪವೃಕ್ಷಮೇಂ॥
ಪೋದನೆ ಹಾ! ವಿಧೀ! ಪರಮಭಕ್ತಶಿರೋಮಣಿ! ನನ್ನ ಕಂದನೇಂ।
ಪೋದನೆ! ವಂಶಮಂ ಬೆಳಗುವದ್ಭುತ ದೀಪಮುದಾಗಿ ಪೋದುದೇ!॥

ಅಯ್ಯೋ! ಕುಲಾಭರಣನಾದ ಪುತ್ರನನ್ನು ಕಳೆದಿರಲ್ಲವೇ! ಈ ಅನರ್ಥಕ್ಕೆ ಕಾರಣವೇನು?

ಕಬೀರ— ಪ್ರಿಯೇ! ಏನೆಂದು ಹೇಳಲಿ! ಶ್ರೀಮಂತನ ಮನೆಯ ಕಿಟಕಿಯ ಕಂಬಿಗಳನ್ನು ಕಿತ್ತು ಒಳಗೆ ಕಮಾಲನನ್ನು ಇಳಿಸಿ ಪದಾರ್ಥಗಳನ್ನು ತರಿಸಿದೆನು. ಆ ಕಿಟಕಿಯನ್ನು ಹಾಗೆಯೇ ಬಿಟ್ಟರೆ ಮತ್ತೆ ಯಾರಾದರೂ ಚೋರರು ಅದರಿಂದ ಮನೆಯೊಳಗೆ ಪ್ರವೇಶಿಸಿ ಆ ಮನೆಯಲ್ಲಿಯ ಪದಾರ್ಥಗಳನ್ನು ಕಳುವುಮಾಡಿಯಾರೆಂಬ ಸಂಶಯದಿಂದ ಕಮಾಲನು ಮತ್ತೆ ಆ ಮನೆಯೊಳಗೆ ಹೋಗಿ ಆ ವಣಿಜನನ್ನೆಬ್ಬಿಸಿ ಓಡಿಬರುವಷ್ಟರಲ್ಲಿ ಒಳಗಿನವರು ಬಾಲಕನ ಕಾಲುಗಳನ್ನು ಹಿಡಿದರು. ಆಗ ಕಿಟಕಿಯೊಳಗಿನಿಂದ ತಲೆಯನ್ನು ಹೊರಗಿಟ್ಟು ಕೂಗಿಕೊಂಡ ಅವನನ್ನು ನಾನು ಹಿಡಿದೆಳೆಯಲು ಅಸಾಧ್ಯವಾಯಿತು. ಇನ್ನು ತನ್ನ ಗುರುತು ಸಿಕ್ಕಿದರೆ ನಾನು ಸಿಕ್ಕಿಬಿದ್ದು ಅದರಿಂದ ಸಾಧುಗಳ ಸತ್ಕಾರಕ್ಕೆ ಭಂಗ

ಬರುವುದೆಂದು ಕಮಾಲನು, ನನ್ನನ್ನು ಕರೆದು ತನ್ನ ಶಿರಸ್ಸನ್ನು ಛೇದಿಸಿ ತೆಗೆದುಕೊಂಡು ಹೋಗಬೇಕೆಂದು ಕೂಗಿಕೊಂಡನು. ಆಗ ಭಯ ಆತುರ ಸಂಕಟ ಸಾಧುಭಕ್ತಿಗಳಿಂದ ನನ್ನ ತನುವೂ ಮನವೂ ಅದಿರಿ ಅಲ್ಲಾಡಿಹೋದುವು. ಆಗ ಕರ್ತವ್ಯವನ್ನರಿಯದೆ ಮಗ್ನನಾಗಿದ್ದರೂ ವಿಳಂಬದಿಂದ ಸಾಧುಗಳ ಆತಿಥ್ಯ ಭಂಗವಾಗಬಾರದೆಂಬ ನಿಶ್ಚಲಮನೋವೃತ್ತಿಯಿಂದ ನಾನು, ಕಮಾಲನು ಹೇಳಿದಂತೆ ಅವನ ಶಿರಸ್ಸನ್ನು ಕೊಯ್ದು ತಂದೆನು.

ಬೀಬಿ—ಅಯ್ಯೋ ! ಕೇಳಲಾರೆನು ! ಕೇಳಲಾರೆನು !! ಹಾ ! ಪ್ರಾಣಪುತ್ರಾ ! ಮುದ್ದು ಕಮಾಲಾ !!

ಕಂ|| ಹಾ ಕಂದ ! ಹಾ ಮನೋಹರ ! |
ಹಾ ಕಂದರ್ಪಾಭರೂಪ ! ಸುಗುಣ ಕಲಾಪಾ ! ||
ಹಾ ಕಂಜನೇತ್ರ ! ಸಜ್ಜನ |
ಲೋಕಾನಂದ್ಯೈಕ ಶೀಲ ಮುದ್ದು ಕಮಾಲಾ||(ಕಬೀರನನ್ನು ನೋಡಿ)

ಅಯ್ಯೋ! ದೈವಭಕ್ತರೂ, ಸಾಧುಗಳೂ ಭೂತದಯಾಪರರೂ ಆದ ನೀವು ನಿಮ್ಮ ಪುತ್ರನನ್ನೇ ವಧಿಸಿದಿರಲ್ಲವೇ? ಪ್ರಾಣಪುತ್ರನನ್ನು ಕಳೆದುಕೊಂಡು ಇನ್ನು ಹೇಗೆ ಬಾಳಲಿ ? ಹಾ ! ನನ್ನನ್ನೂ ಈ ಕತ್ತಿಯಿಂದ ಛೇದಿಸಿಬಿಡಿ. ಅಯ್ಯೋ ! ವಿಧಿಯೇ ! ನಿತ್ಯ ದರಿದ್ರಾವಸ್ಥೆಗೂ ವ್ಯಥೆಪಡಲಿಲ್ಲ ನಿತ್ಯೋಪವಾಸಗಳಿಗೂ ಬೇಸರಪಡಲಿಲ್ಲ ! ದೈವಭಕ್ತನೂ ಪರಮ ಸಾಧುವೂ ವಿವೇಕಿಯೂ ಆಗಿ ಪ್ರಾಣಸಮಾನನಾಗಿದ್ದ ಪುತ್ರನೊಬ್ಬನನ್ನು ನೋಡಿಕೊಂಡಾನಂದದಿಂದಿದ್ದೆವಲ್ಲಾ ! ಅಯ್ಯೋ ! ಸುಕುಮಾರ ಶರೀರನೂ ವಂಶಾಲಂಕಾರನೂ ಆದ ಪ್ರಾಣಪುತ್ರನನ್ನು ನಿಮ್ಮ ಕೈಯಿಂದಲೇ ವಧಿಸಿ ಇಂತಹ ಸಂಕಟವನ್ನು ತಂದಿರಲ್ಲಾ ! ಸ್ವಂತ ಪುತ್ರನನ್ನು ವಧಿಸಲು ನಿಮಗೆ ಮನಸ್ಸು ಹೇಗೆ ಒಪ್ಪಿತು ? ಕೈ ಹೇಗೆ ಬಂತು ? ಆ ಕಾಲದಲ್ಲಿ ನಿಮ್ಮ ಮನಸ್ಸು ಎಷ್ಟು ಕಾಠಿಣ್ಯವನ್ನು ವಹಿಸಿತ್ತು. ಹಾ ! ದೈವವೇ ! ಅಯ್ಯೋ ! ನನ್ನ ಮೋಹದದರಗಿಣಿಯನ್ನು ಕೊಂದಿರಲ್ಲಾ ! ನನ್ನ ಕುಮಾರರತ್ನವನ್ನು ಕಳೆದಿರಲ್ಲಾ ! ನನ್ನನ್ನು ನಿರ್ಭಾಗ್ಯಳನ್ನಾಗಿ ಮಾಡಿದಿರಲ್ಲಾ ! ಹಾ ! (ಮೂರ್ಛೆ ಹೋಗುವಳು.)

ಕಬೀರ—(ಎಚ್ಚರಿಸಿ) ಪ್ರಿಯೇ ! ಏನೀ ಅಜ್ಞಾನವು ? ಈ ಮೋಹವು ! ಏಳು ! ಏಳು ಏಕೆ ವ್ಯರ್ಥವಾಗಿ ಈ ಮೃಣ್ಮಯವಾದ ಈ ದೇಹದಲ್ಲಿ ಅಭಿಮಾನವನ್ನಿಟ್ಟು ಈರೀತಿ ಶೋಕಿಸಬಹುದೇ ?

ಭಾ|| ಪೊಡವಿಯೊಳ್ ಜನಿಪಾಗಳೊರ್ವನೆ |
ಕಡೆಯೊಳೈದುವ ನೊರ್ವನೇ ಮಿಗೆ |
ನಡುವೆ ಬರ್ಪಾಬಂಧುಬಳಗವು ವಿವಿಧ ಕಷ್ಟಗಳ ||
ಕೊಡುತೆ ಮೋಹದಿ ನಿತ್ಯಸುಖವನು |
ಕೆಡಿಪ ವೆಂಬುದನರಿತು ಮೋಹವ |
ಬಿಡುತೆ ಸುಖದುಃಖಗಳ ಸಮವೆಂದೆಣಿಪನುತ್ತಮನು ||೨೪||

ಪ್ರಿಯೇ ! ಲೋಕನಾಟಕ ರಂಗದಲ್ಲಿ ಸರ್ವರೂ ತಮ್ಮ ತಮ್ಮ ಪಾತ್ರಗಳನ್ನಭಿನಯಿಸಲು ಬಂದ ವೇಷಧಾರಿಗಳಲ್ಲವೇ ! ವೇಷಧಾರಿಯಾಗಿದ್ದವನು ಆ ಉಡುಪನ್ನು ತೆಗೆದ ಮಾತ್ರಕ್ಕೇ ಆ ಮನುಜನು ನಾಶವಾದಂತೆ ಎಣಿಸಬಹುದೇ? ಉಡುಪನ್ನು ಬಿಚ್ಚಿದಂತೆ ಆತ್ಮವು ಈ ಪಾರ್ಥಿವ ಶರೀರವನ್ನು ಬಿಡುವುದೇ ಮರಣವೆನಿಸುವುದು. ಆದಕ್ಕಾಗಿ ಶೋಕಿಸಲೇಕೆ ? ರಕ್ತಮಾಂಸಾಸ್ಥಿಗಳಿಂದ ಕೂಡಿದ ಈ ಶರೀರಕ್ಕಾಗಿ ಏತಕ್ಕೆ ಶೋಕಿಸುವೆ ?

ಬೀಬಿ—ಅಯ್ಯೋ ! ನಾವು ಆ ಶರೀರವನ್ನಲ್ಲವೇ ಮಗನೆಂದು ಲಾಲಿಸಿ ಆನಂದಪಡುತ್ತಿದ್ದುದು ! ಅದನ್ನು ಕಳೆದಿರಲ್ಲವೇ !!

ಕಬೀರ—ಹಾಗಾದರೆ ಪ್ರಾಣವು ಹೊರಟುಹೋದಮೇಲೆ ಆ ಶರೀರವನ್ನು ಪುತ್ರನೆಂದು ಲಾಲಿಸುವೆಯಾ ?

ಬೀಬಿ—ಜೀವವಿಲ್ಲದ ಶರೀರವನ್ನು ಹಾಗೆ ಭಾವಿಸಲಾದೀತೆ ?

ಕಬೀರ—ಆದುದರಿಂದ ಆತ್ಮನ ಸ್ಥಿತಿಯೇ ಪ್ರಧಾನವಲ್ಲದೆ ಶರೀರವೇ ಮುಖ್ಯವಲ್ಲವೆಂಬುದು ನಿನಗೆ ಗೊತ್ತಾಯಿತೆ ?

ಬೀಬಿ—ನಿಜ, ಆದರೂ ಶರೀರವಿಲ್ಲದ ಆತ್ಮವು ನಮಗೆ ಕಾಣುವುದೇ ?. ನಾವು ಅದನ್ನು ಲಾಲಿಸಿ ಸಂತೋಷಪಡಬಹುದೇ ?

**ಕಬೀರ**—ಅದು ನಮ್ಮ ಅಂತಶ್ಚಕ್ಷುಗಳನ್ನು ತೆರೆದು ನೋಡಿದರೆ ಕಾಣುವುದ ಲ್ಲದೆ ಈ ಚರ್ಮಚಕ್ಷುಗಳಿಗೆ ಕಾಣುವುದಿಲ್ಲ. ಈ ಚರ್ಮಚಕ್ಷುಗಳು ಶಾಶ್ವತವಾದುವುಗಳಲ್ಲ. ಹೇಗೆಂದರೆ; ನಮ್ಮ ಕಮಾಲನ ದೇಹವು ಬಿದ್ದುಹೋದಂತೆಯೇ ನಮ್ಮ ದೇಹಗಳೂ ಬಿದ್ದುಹೋಗುವುವು. ಆಗ ನಮ್ಮ ಆತ್ಮಗಳು ಮಾತ್ರವೇ ನಿಲ್ಲುವವು. ಹೀಗಿರುವಲ್ಲಿ ದೇಹಾಭಿ ಮಾನವೇಕೆ? ದೇಹವು ಅಸ್ಥಿರವಾದುದು, ಆದುದರಿಂದ ಅದಕ್ಕಾಗಿ ನಾವು ಶೋಕಿಸಲಾಗದು.

**ಬೀಬಿ**—ಪ್ರಿಯಾ! ಹಾಗಾದರೆ ಆ ಆತ್ಮವನ್ನು ನೋಡಲು ನಮಗೆ ಹೇಗೆ ಸಾಧ್ಯವು?

**ಕಬೀರ**—ಪರಮಾತ್ಮನ ಧ್ಯಾನೋಪಾಸನೆಗಳಿಂದ ನಾವು ನಮ್ಮ ಅಂತಶ್ಚಕ್ಷು ಗಳನ್ನು ಕ್ರಮವಾಗಿ, ತೆರೆಯಲು ಶಕ್ತರಾದರೆ ಆಗ ಕಮಾಲನನ್ನು ಮಾತ್ರವಲ್ಲ, ಪರಮಾತ್ಮನನ್ನು ಸಹ ನೋಡಬಹುದು. ಹಾಗೆ ಅಂತ ಶ್ಚಕ್ಷುಗಳಿಂದ ನಾವು ಪರಮಾತ್ಮನನ್ನು ನೋಡುವುದಾದರೆ ಆಗ ನಾನು, ನನ್ನದು ಎಂಬ ಅಹಂಕಾರ ಮಮಕಾರಗಳೇ ಪೂರ್ಣವಾಗಿ ತೊಲಗಿ ಪುತ್ರನು, ಪತಿಯು, ಪತ್ನಿಯು, ಎಂಬ ಅಭಿಮಾನವು ನಿಶ್ಶೇಷವಾಗು ವುದು, ಆದರಿಂದ ಲೋಕದಲ್ಲಿ ಯಾರೂ ದುರಭಿಮಾನದಿಂದ ವರ್ತಿಸ ಬಾರದೆಂಬುದೇ ತತ್ವವು. ಇದನ್ನರಿಯದೆ ಅಜ್ಞಾನವಶರಾಗಿ ಸುಖ ದುಃಖಗಳಿಂದ ಸಂತೋಷವ್ಯಸನಗಳಿಗೊಳಗಾಗತಕ್ಕವರು ಮೂಢರು, ಕಷ್ಟಭಾಗಿಗಳು, ದೈವಕೃಪೆಗೆ ದೂರರು, ಮುಕ್ತಿಮಾರ್ಗವನ್ನು ಕಾಣದ ಅಂಧರು. ಶ್ರೀರಾಮಚಂದ್ರನ ಅನುಗ್ರಹಕ್ಕೆ ಪಾತ್ರರಾಗಿ ಪಾರಲೌ ಕಿಕ ಸುಖವನ್ನಿಚ್ಛಿಸಿ ಸಂಸಾರ ಬಂಧನವನ್ನು ತೊಲಗಿಸಿಕೊಂಡು ನಿತ್ಯ ಸಂತೋಷವನ್ನು ಪಡೆಯಬೇಕೆಂಬ ಅಭಿಲಾಷೆಯುಳ್ಳವರು ಈ ವಿಧವಾದ ದುಃಖಕ್ಕೆ ಮನಸ್ಸನ್ನು ಕೊಡತಕ್ಕುದಲ್ಲ. ಈ ತತ್ವವನ್ನು ಮನಸ್ಸಿನಲ್ಲಿ ಗ್ರಹಿಸಿ ಈ ಪುತ್ರಾಭಿಮಾನದ ಶೋಕವನ್ನು ಬಿಡು.

**ಬೀಬಿ**—ಪ್ರಿಯಾ! ನಿಜ, ಆದರೆ! ಈಗ ಮಗನನ್ನು ವಧಿಸಿದ ಪಾಪವು ನಿಮಗಿಲ್ಲವೋ?

ಕಬೀರ—ಅಯ್ಯೋ ! ಮರುಳೇ, ಕೇಳು, ಆಶಾಪಾಶ ಬದ್ಧರಾಗಿ ಕಾಮ ಕ್ರೋಧಾದಿಗಳಿಗೆ ಸಿಕ್ಕಿ ಮಾಡುವ ಕಾರ್ಯಗಳೆಲ್ಲ ನರರಿಗೆ ಪಾಪಲೇಪ ವುಂಟಾಗುವುದಲ್ಲವೆ, ಆಸೆಯನ್ನೂ ದೇಹಾಭಿಮಾನವನ್ನೂ ತೊರೆದು ಪರಮಾತ್ಮನಿಗೆ ಅರ್ಪಿತವಾಗುವಂತೆ ಮಾಡುವ ಯಾವ ಕಾರ್ಯವೂ ಪಾಪಕರವಾಗಲಾರದು. ಹೀಗಿರುವಲ್ಲಿ ಆತ್ಮಾಭಿಮಾನವನ್ನು ತೊರೆದು ಭಗವದರ್ಪಿತವಾಗಲು ಸಾಧುಸೇವೆಗಾಗಿ ನಾನು ಮಾಡಿದ ಈ ಕಾರ್ಯ ದಲ್ಲಿ ನನಗೆ ಪಾಪವೆಂದರೇನು ? ಯಜ್ಞಪುರುಷನ ತೃಪ್ತಿಗಾಗಿ ನಡೆ ಸುವ ಆಹುತಿ ಕಾರ್ಯಗಳಲ್ಲಿ ಸೋಮಯಾಜಿಗೆ ಪಶುವಧೆಯ ದೋಷ ವುಂಟಾಗುವುದೇ ? ಪರಮಾತ್ಮನೂ ಆತನ ಭಕ್ತರೂ ಇವರಿಗಿಂತಲೂ ಹೆಚ್ಚಾಗಿ ನಾವು ಪ್ರೀತಿಸಬೇಕಾದ ವಸ್ತುಗಳು ಇನ್ನು ಲೋಕದಲ್ಲಿ ಯಾವುವೂ ಇಲ್ಲ. ನಮ್ಮ ದೇಹವೂ ನಹ ನಮಗೆ ಅಷ್ಟು ಪ್ರಿಯವಾ ದುದಲ್ಲ, ಇನ್ನು ಸತಿಸುತರ ಮಾತೇನು ! ಆದುದರಿಂದ ದುಃಖಜನಕ ವಾದ ಅಭಿಮಾನವನ್ನು ಕಡಿಮೆಮಾಡಲು ಪರಮಾತ್ಮನು ತನ್ನ ಭಕ್ತರಿಗೆ ಇಂತಹ ಸಂಧಿಗಳನ್ನು ಒದಗಿಸಿ ವೈರಾಗ್ಯವನ್ನು ವೃದ್ಧಿಪಡಿಸಿ ಕೊಳ್ಳಲು ಸಹಾಯಗಳನ್ನು ಕಲ್ಪಿಸಿಕೊಡುತ್ತಿರುವನು ಈ ತತ್ವ ವನ್ನು ಅರಿತು ನಾವು ಈ ಅಲ್ಪವಾದ ಸಾಂಸಾರಿಕ ಸಂತೋಷಕ್ಕೆ ಗಮನ ಕೊಡದೆ ಅಭಿಮಾನವನ್ನು ತೊಲಗಿಸಿ ಕಮಲಪತ್ರದ ಮೇಲಣ ಜಲಬಿಂದುಗಳಂತೆ ಸಂಸಾರಕ್ಕೆ ಸೋಕಿಯೂ ಸೋಕದಂತ ಇರಬೇಕು; ಆದಕಾರಣ ಅತಿಥಿಸತ್ಕಾರವೂ ದೇವತಾತೃಪ್ತಿಯೂ ಮುಖ್ಯವೆಂದು ಭಾವಿಸಿರುವ ನೀನು ಅಲ್ಪವಾದ ಆ ಕಮಾಲನ ಶರೀರಕ್ಕಾಗಿ ದುಃಖಿ ಸುವುದಾದರೆ ನಾವು ನಿತ್ಯಾನಂದಪದವಿಯ ಮಾರ್ಗವನ್ನು ಬಿಟ್ಟು ಸಂಸಾರಾಧ್ವವೆಂಬ ಕಂಟಕಮಯ ಮಾರ್ಗಕ್ಕೆ ತಿರುಗಿ ಶಾಶ್ವತ ಸುಖ ವನ್ನು ಕಳೆದುಕೊಳ್ಳಬೇಕಾಗುವುದು. ಅದುದರಿಂದ ಮೋಹವನ್ನು ಬಿಟ್ಟು ಪರ್ಯಾಲೋಚಿಸಿ ಈ ದುಃಖವನ್ನು ತೊಲಗಿಸು.

೨೭. ಕಂ|| ಜನನ ಮರಣಂಗಳೆಲ್ಲಂ |
ಜನಕ ಸುತಾಧವನಧೀನ ಮಿಂತಿರೆ ನಿಜಮುಂ ||
ಮನದೆಣಿಸದೆ ದುಃಖಿಪರೇಂ |
ವನಿತಾಮಣಿ ತತ್ವಮರಿತು ಶಾಂತಿಯ ತಳೆ ನೀಂ || ೨೭ ||

**ಬೀಬಿ**—ಮಹಾನುಭಾವ ! ತಮ್ಮ ಉಪದೇಶದಿಂದ ಧನ್ಯಳಾದೆನು. ನನ್ನ ಅಜ್ಞಾನವು ತೊಲಗಿತು ; ಇದೋ ! ದುಃಖವನ್ನು ಬಿಟ್ಟೆನು. ಈ ಪಾರ್ಥಿವ ಶರೀರಾಭಿಮಾನವನ್ನು ಬಿಟ್ಟೆನು ! ಬಿಟ್ಟೆನು !! ಅತಿಥಿಸತ್ಕಾರಕ್ಕಾಗಿ ಈ ವಿಧವಾದ ಕಾರ್ಯವನ್ನು ಮಾಡಿದ ತಮ್ಮ ಸ್ಥೈರ್ಯವೂ ಜ್ಞಾನವೂ ಅದ್ಭುತವಾದವುಗಳು ! ಶ್ರೀರಾಮನ ಚಿತ್ತವಿದ್ದಂತೆ ಕಾರ್ಯಗಳು ನಡೆಯುವುವಲ್ಲದೆ ನಾವುಗಳು ಕಾರಣರಲ್ಲ. ಇನ್ನು ಸಾಧುಗಳ ಪಾರಣೆಗೆ ಬೇಕಾದುವನ್ನು ಗಮನಿಸೋಣ.

**ಕಬೀರ**—ಹಾಗೆಯೇ ಆಗಲಿ ; ಅವರ ಪಾರಣೆಯು ಪೂರಯಿಸಿದನಂತರ ನಾವಿಬ್ಬರೂ ಗಂಗಾತೀರದವರೆಗೂ ಅವರನ್ನು ಹಿಂಬಾಲಿಸಿ ಹೋಗಿ ಪ್ರಯಾಣ ಮಾಡಿಸಿ ಬರೋಣ.

**ಬೀಬಿ**—ಹಾಗೆಯೇ ಆಗಲಿ. (ಹೋಗುವರು.)

ಸ್ಥಾನ ೮ (ರಾಜವೀಧಿಯಲ್ಲಿ ಗ್ರಾಮರಕ್ಷಕರೊಡನೆ

**ಅಧಿಕಾರಿಯು ಪ್ರವೇಶಿಸುವನು.)**

**ಅಧಿಕಾರಿ**—ಎಲೈ ! ನೀವುಗಳು ನಿನ್ನೆಯರಾತ್ರಿ ನಿಮ್ಮನಿಮ್ಮ ಬೀದಿಗಳಲ್ಲಿ ಎಚ್ಚರದಿಂದ ಕಾವಲಿದ್ದಿರೋ ?

**ಗ್ರಾಮರಕ್ಷಕರು**—ಬಹು ಎಚ್ಚರದಿಂದ ಕಾವಲಿದ್ದೆವು ಮಹಾಸ್ವಾಮಿ !

**ಅಧಿಕಾರಿ**— ಹಾಗಾದರೆ, ಅರ್ಧರಾತ್ರಿಯ ಸಮಯದಲ್ಲಿ ನೀವುಗಳೆಲ್ಲರೂ ವಿಶ್ವನಾಥ ದೇವಾಲಯದ ಬಳಿಯಲ್ಲಿ ಗುಂಪುಕಟ್ಟಿಕೊಂಡು ಹುಚ್ಚುಹುಚ್ಚಾಗಿ ನಗುತ್ತ ಹರಟಿಕೊಂಡು ಬರುತ್ತಿರಲಿಲ್ಲವೇ ?

**ಗನೇಯುವನು**—ಅಹುದು ; ಮಹಾಸ್ವಾಮಿ ನಿಜ.

**ಅಧಿಕಾರಿ**—(ಕೋಪದಿಂದ) ನಿಜವೇ ? ಹಾಗಾದರೆ ನೀವು ನಿಮ್ಮ ಕರ್ತವ್ಯಗಳನ್ನು ಬಿಟ್ಟು ಹಾಗೆ ಗುಂಪು ಸೇರಿರಲೇನು ಕಾರಣ ?

**ಗನೆಯವನು**— ಸ್ವಾಮಿ ! ರಾತ್ರಿ ಸುಮಾರು ಹನ್ನೆರಡುಘಂಟೆಯ ಸಮಯದಲ್ಲಿ ಆ ಈಶಾನ್ಯದ ಓಣಿಯಿಂದ ಭಯಂಕರವಾದ ಘೊ....ಳೆಂಬ ಶಬ್ದವೂ ಗೋಳಾಟದ ಧ್ವನಿಯೂ ಕೇಳಿಬಂದುವು. ಅಲ್ಲಿ ಕಳ್ಳತನವೋ

ಕೊಲೆಯೋ ಏನೋ ನಡೆದಿರಬಹುದೆಂದು ತಿಳಿದು ನಾನು ಪದ್ಧತಿಯಂತೆ ಭಯಸೂಚಕವಾಗಿ ಸಿಳುಹೆಯನ್ನೂದುತ್ತ ಅಲ್ಲಿಗೆ ಓಡಿಹೋದೆನು.

**ಉಳಿದವರು**—ಅಹುದು ; ಅದರಿಂದಲೇ ನಾವೂ ಅಲ್ಲಿಗೆ ಓಡಿಹೋದೆವು.

**ಅಧಿಕಾರಿ**—ಆಯಿತು. ಅಲ್ಲಿ ನಡೆದಿದ್ದ ವಿಚಾರವೇನು ?

೧ನೆಯವನು—ಅಲ್ಲಿ ನೂರಾರು ಜನಗಳು ನೆರೆದಿದ್ದರು. ಅನೇಕರು ವಿಚಾರವೇನೆಂದು ಗಟ್ಟಿಯಾಗಿ ಕೂಗಿಕೊಳ್ಳುತ್ತಿದ್ದರು, ಮತ್ತೆ ಕೆಲವರು ಮನೆಯಲ್ಲಿ ಏನೋ ಪ್ರಾಣಾಪಾಯವುಂಟಾಗಿರಬೇಕೆಂದು ಅರಚಿಕೊಳ್ಳುತ್ತ ಅದನ್ನು ತಪ್ಪಿಸಲು ಮನೆಯೊಳಕ್ಕೆ ನುಗ್ಗುತ್ತಿದ್ದರು. ಒಳಗಿನಿಂದ ಗೋಳಾಟದಂತೆಯೂ ಹುಚ್ಚು ಹುಚ್ಚಾದ ನಗುವಿನಂತೆಯೂ ಚಿತ್ರವಿಚಿತ್ರವಾದ ಕೂಗಿನ ಗದ್ದಲವು ಕೇಳಿಬರುತ್ತಿತ್ತು.

**ಅಧಿಕಾರಿ**—ನೀವುಗಳು ಇದೆಲ್ಲವನ್ನೂ ನೋಡುತ್ತ ಹೇಡಿಗಳಂತೆ ನಿಂತಿದ್ದಿರೋ ?

೨ನೆಯವನು—ಇಲ್ಲ, ಮಹಾಸ್ವಾಮಿ ! ನಾನು ಮೊದಲು ಗುಂಪಿನಲ್ಲಿ ನುಗ್ಗಿ ಬಹುಪ್ರಯಾಸದಿಂದ ಮನೆಯೊಳಗೆ ಹೋದೆನು. ನನ್ನ ಹಿಂದೆ ಇವರೆಲ್ಲರೂ ಬಂದರು.

**ಅಧಿಕಾರಿ**—ಆಯಿತು, ಅನಂತರ ?

೧ನೆಯವನು—ನಾನು "ಮನೆಯಲ್ಲಿ ನಡೆದಿರುವ ಅಪಾಯವೇನು ? ಏತಕ್ಕೆ ಅಳುತ್ತೀರಿ ?" ಎಂದು ಕೂಗಿಕೊಂಡೆನು. ಅದನ್ನು ಕೇಳಿದ ಕೂಡಲೇ ಆ ಮನೆಯ ಗಯ್ಯಾಳಿಗಂಗಮ್ಮನು ರೇಗಿ ಬೆಂಕಿಬೆಂಕಿಯಾಗಿ "ಅಪಾಯ, ಅಳು," ಎಂದು ಅವಲಕ್ಷಣದ ಮಾತನ್ನಾಡುವೆಯಾ ?" ಎಂದು ಆರ್ಭಟಿಸಿ ಒನಕೆಯನ್ನೆತ್ತಿ ನನ್ನ ತಲೆಬುರುಡೆಯನ್ನೇ ಹಾರಿಸಲು ಬಂದಳು.

**ಅಧಿಕಾರಿ**—ಕಾರಣ ?

೧ನೆಯುವನು—ನಾನೇನೆಂದು ಹೇಳಲಿ; ವಿಚಾರಿಸುವಲ್ಲಿ ಬಹಳ ದಿನಗಳ ಹಿಂದೆ ದೇಶಾಂತರ ಹೋಗಿದ್ದ ಆಕೆಯ ಅಳಿಯನು ಆದಿನರಾತ್ರಿ ಹಿಂದಿರುಗಿ ಬಂದನಂತೆ, ಆ ಸಂತೋಷ ವರ್ತಮಾನವನ್ನು ಕಿವುಡನಾದ ಮುದಿಗಂಡನಿಗೆ ಆಕೆ ತಿಳಿಸಿ ಆನಂದಪಡುತ್ತಿದ್ದ ರಭಸವೇ ಈ ಗದ್ದಲಕ್ಕೆ ಕಾರಣವೆಂದು ತಿಳಿಯಿತು.

ಅಧಿಕಾರಿ—(ನಕ್ಕು) ಸರಿ, ಒಳ್ಳೆಯ ವಿಚಾರ! ಒಳ್ಳೆಯ ವಿಚಾರ!!

೨ನೆಯುವನು—ಅನಂತರ ನಾವುಗಳೆಲ್ಲರೂ ಆ ಗಯ್ಯಾಳಿಯ ರೂಪ ಆರ್ಭಟೆ ರಭಸಗಳಿಗೆ ಬೆರಗಾಗಿ ಕಾರಣವಿಲ್ಲದೆ ಉಂಟಾದ ಗದ್ದಲಕ್ಕಾಗಿ ನಗುತ್ತ ವಿಶ್ವನಾಥ ದೇವಾಲಯದ ಬೀದಿಯಲ್ಲಿ ಹೊರಟು ನಮ್ಮನಮ್ಮ ಕಾವಲಿನ ಬೀದಿಗಳಿಗೆ ಹೋದೆವು. ಇಷ್ಟೆ ಸ್ವಾಮಿ ವಿಚಾರ.

ಅಧಿಕಾರಿ—(ನಕ್ಕು) ಚೆನ್ನಾಯಿತು! ಒಳ್ಳೆಯ ವಿಚಿತ್ರವಿಚಾರ! ಆದಿರಲಿ! ಎಲೈ! (೩ ನೆಯವನನ್ನು ನೋಡಿ) ನೀನು ಶ್ರೀರಾಮದೇವಾಲಯದ ಬೀದಿಯಲ್ಲಿ ಕಾವಲಿದ್ದೆನೆಂದು ಹೇಳುವೆಯಲ್ಲಾ! ಆ ಬೀದಿಯಲ್ಲಿ ಏನೂ ವಿಶೇಷಸಂಗತಿ ನಡೆಯಲಿಲ್ಲವೋ?

೩ನೆಯವನು—ನಾನಿದ್ದಾಗ ಯಾವುದೂ ನಡೆಯಲಿಲ್ಲ.

ಅಧಿಕಾರಿ—(ಕೋಪದಿಂದ) ನೀನಿದ್ದಾಗ ನಡೆಯಲಿಲ್ಲವೋ? ನಡೆದಾಗ ನೀನಿರಲಿಲ್ಲವೋ?

೩ನೆಯವನು—ಎರಡೂ ನಿಜ ಮಹಾಸ್ವಾಮಿ! ........ನಾನು ಇವರ ಜೊತೆಯಲ್ಲಿ ಹೋಗಿದ್ದಾಗ ಏನೇನು ನಡೆಯಿತೋ ನನಗೆ ತಿಳಿಯದು.

ಅಧಿಕಾರಿ—ಇದೋ ನೋಡು. ಏನು ನಡೆಯಿತೆಂಬುದು ಇದರಿಂದ ವ್ಯಕ್ತವಾಗುವುದು. (ಪತ್ರವನ್ನು ಕೈಗೆ ಕೊಡುವನು.)

೩ನೆಯವನು—ಸ್ವಾಮಿ! ವೆಂಕಟಯ್ಯಸೆಟ್ಟರ ಮನೆಯಲ್ಲಿ ಕಳವು ನಡೆದಿರುವಂತೆ ತಿಳಿಸಿರುವರು.

ಅಧಿಕಾರಿ—ಅದಕ್ಕೆ ಯಾರು ಹೊಣೆ?

೩ ನೆಯವನು—ಕದ್ದವರು ಮಹಾಸ್ವಾಮಿ! ಮತ್ತೆ ಯಾರು?

**ಅಧಿಕಾರಿ**—ಕದ್ದವರೋ ? ಆಗಲಿ ! ಈಗ ಅಲ್ಲಿಗೆ ಹೋಗಿ ನಾನು ವಿಚಾರಣೆ ಮಾಡುವೆನು; ನಿಜಸ್ಥಿತಿಯು ವ್ಯಕ್ತವಾದರೆ ಸಮ, ಇಲ್ಲವಾದರೆ ನಿನ್ನನ್ನೇ ಈ ಅಪರಾಧಕ್ಕೆ ಗುರಿಮಾಡಿ, ತಕ್ಕುದನ್ನು ಮಾಡುವೆನು.

**೩ನೆಯವನು**—ಆಗಲಿ ಸ್ವಾಮಿಾ ! ಸತ್ಯವಾಗಿ ಕೆಲಸ ಮಾಡಿದ್ದಕ್ಕೆ ಶಿಕ್ಷೆಯಾದರೆ ಅದನ್ನು ಅನುಭವಿಸುವುದಕ್ಕೆ ವ್ಯಸನವೇಕೆ ?

**ಅಧಿಕಾರಿ**—ಇರಲಿ. ಬನ್ನಿ ಆ ವೆಂಕಟಯ್ಯಸೆಟ್ಟಿಯ ಮನೆಗೆ ಹೋಗೋಣ.

(ಹೋಗುವರು.)

ದೃಶ್ಯ ೯ (ವೆಂಕಟಯ್ಯಸೆಟ್ಟಿಯ ಮನೆಯಮುಂದೆ ಅಧಿಕಾರಿಯು ಗ್ರಾಮರಕ್ಷಕರೊಡನೆ ಪ್ರವೇಶಿಸುವನು.)

**ಅಧಿಕಾರಿ**—ಎಲವೋ ! ಆ ಸೆಟ್ಟರನ್ನು ಹೊರಗೆ ಕರೆ.

**೧ನೆಯವನು**—(ಬಾಗಿಲ ಬಳಿಗೆ ಹೋಗಿ) ಸೆಟ್ಟರೇ ! ಸೆಟ್ಟರೇ, ವೆಂಕಟಯ್ಯ ಸೆಟ್ಟರೇ !

**ವೆಂಕಟಯ್ಯಸೆಟ್ಟಿ**—(ಪ್ರವೇಶಿಸಿ ಬಗ್ಗಿ ಅಧಿಕಾರಿಗೆ ನಮಸ್ಕರಿಸಿ) ಸ್ವಾಮಿಗಳಿಗೆ ಶರಣು. ಎಲಾ ! ಪಟ್ಟಾಬೀ ಸ್ವಾಮಿಗಳಿಗೆ ಮಣೆತಂದು ಹಾಕೋ .......

**ಅಧಿಕಾರಿ**—ಇರಲಿ, ಚಿಂತೆಯಿಲ್ಲ, ಸೆಟ್ಟರೇ. ನಿಮ್ಮ ಮನೆಯಲ್ಲಿ ಕಳ್ಳತನವು ನಡೆಯಿತೆಂದು ಬರೆದುಕೊಂಡಿರುವಿರಲ್ಲಾ ! ಅದು ನಡೆದಾಗ ಎಷ್ಟು ಹೊತ್ತಾಗಿತ್ತು ?

**ವೆಂಕಟಯ್ಯ**—ರಾತ್ರಿಯಾಗಿತ್ತು ಸ್ವಾಮಿ, ರಾತ್ರಿ

**ಅಧಿಕಾರಿ**—ಅದು ಸರಿ, ರಾತ್ರಿಯೆಂಬುದನ್ನು ಬಲ್ಲೆನು. ಆಗ ಹೊತ್ತೆಷ್ಟಾಗಿತ್ತು ?

**ವೆಂಕಟಯ್ಯ**—ದೇವರೇ ! ನಾವು ರಾತ್ರಿ ಊಟಮಾಡಿ ದೀಪವಾರಿಸಿ ಮಲಗಿದೆವು, ಆ ಸಮಯದಲ್ಲಿ ನಡೆದು ಹೋಯಿತು ಸ್ವಾಮಿಾ ಕೆಲಸ.... ನಡೆದುಹೋಯಿತು (ನಿಟ್ಟುಸಿರು ಬಿಡುವನು.)

**ಅಧಿಕಾರಿ**—ಆದಿರಲಿ, ನಾನು ಅದನ್ನು ಕೇಳಲಿಲ್ಲ. ಆಗ ಹೊತ್ತೆಷ್ಟೆಂಬು ದನ್ನು ಹೇಳಿ.

**ವೆಂಕಟಯ್ಯ**—ರಾತ್ರಿ ಹೊತ್ತು, ದೇವರೇ ! ರಾತ್ರಿ ಹೊತ್ತು.

**ಅಧಿಕಾರಿ**—(ಆತ್ಮ) ಒಳ್ಳೆಯ ಪೀಡೆಯ ಸಹವಾಸ ಬಂತೇ ! (ಕೋಪ ದಿಂದ) ರಾತ್ರಿಯೆಂಬುದನ್ನು ಬಲ್ಲೆನಯ್ಯಾ ಕಾಲವೆಷ್ಟಾಗಿತ್ತು ಹೇಳು ಅಂದರೆ ರಾತ್ರಿಯಂತೆ ರಾತ್ರಿ ! ರಾತ್ರಿ !!

**ವೆಂಕಟಯ್ಯ**—(ಹೆದರಿ) ಅದೇನೋ ಸ್ವಾಮಿ ನನಗೆ ತಿಳಿಯದು ನಮ್ಮ ನೀಲ ಗಿರಿ ಬಾವಯ್ಯನನ್ನು ಕೇಳಬೇಕು

**ಅಧಿಕಾರಿ**—ಹಾಗಾದರೆ ನೀವು ಮನೆಯಲ್ಲಿರಲಿಲ್ಲವೇ ?

**ವೆಂಕಟಯ್ಯ**—ಇದ್ದೆ, ಆಗ ನನಗೆ ನಿದ್ದೆ.

**ಅಧಿಕಾರಿ**—ಸರಿ, ಹಾಗಾದರೆ ಮನೆಯಲ್ಲಿ ಯಾರುಯಾರಿದ್ದಿರಿ ?

**ವೆಂಕಟಯ್ಯ**—ನಾನು, ನಮ್ಮ ಸುಬ್ಬಕ್ಕಜ್ಜಿ, ಸುಬ್ಬರಂಗಯ್ಯ ತಾತ, ಮತ್ತೆ ಇವನು, ನಮ್ಮ ಅವಳು, ನಮ್ಮ ಪಟ್ಟಾಬಿ, ನಮ್ಮ ನೀಲಗಿರಿ ಬಾವ ಇವ ರೆಲ್ಲರೂ ಇದ್ದೆವು.

**ಅಧಿಕಾರಿ**—ಸರಿ ! ಹಾಗಾದರೆ ಆ ನಿಮ್ಮ ಭಾವನನ್ನಾದರೂ ಕರೆಯಿಸಿ, ಆತ ನನ್ನು ಕೇಳೋಣ.

**ವೆಂಕಟಯ್ಯ**—ಬಾವಾ ! ಬಾವಯ್ಯಾ, ನೀಲಗಿರಿ ಬಾವ, ದೊರೆಗಳು ನಿನ್ನ ನೋಡಬೇಕಂತೆ ಬಾ.....

**ನೀಲಗಿರಿ**—(ಪ್ರವೇಶಿಸಿ) ವೆಂಕಟಯ್ಯ ಬಾವಾ ! ಏನಪ್ಪಾ ?

**ವೆಂಕಟಯ್ಯ**—(ಅಳುತ್ತ) ಏನು ಹೇಳಲಪ್ಪಾ ! ಹೊಟ್ಟೆಯಲ್ಲಿ ಉರಿಯಪ್ಪಾ !

**ಅಧಿಕಾರಿ**—(ಆತ್ಮ) ಆಹಾ ! ನೀಲಗಿರಿ ನೀಲಗಿರಿಯೇ ಆಗಿದ್ದಾನೆ ! ಎಂತಹ ದೈವಸೃಷ್ಟಿ ! ಅಯ್ಯಾ ! ನೀಲಗಿರಿಸೆಟ್ಟರೇ, ನಿಮ್ಮ ಮನೆಯಲ್ಲಿ ಕಳ್ಳ ತನವು ನಡೆದಾಗ ಎಷ್ಟು ಹೊತ್ತಾಗಿತ್ತು ?

**ನೀಲಗಿರಿ**—ರಾತ್ರಿ ಹೊತ್ತಾಗಿತ್ತು ದೇವರೇ, ರಾತ್ರಿ ಹೊತ್ತು. ನೀನು ಹೇಳ ಲಿಲ್ಲವೇ ಬಾವಾ ?

**ವೆಂಕಟ**—ಹೇಳಿದೆನಪ್ಪಾ! ಹೇಳಿದೆ! ಅದಕ್ಕೆ ಸ್ವಾಮಿಗಳು ಬೆಂಕಿಯಾದರು.

**ನೀಲಗಿರಿ**—ಚೆನ್ನಾಯಿತಲ್ಲಾ! ಸ್ವಾಮಿಾ! ನಾವು ರಾತ್ರಿ ಊಟಮಾಡಿ, ಸ್ವಲ್ಪಹೊತ್ತು ಹೂತನಾಡುತ್ತಾ ಇದ್ದು ಮಲಗಿಕೊಂಡೆವು. ನನಗೆ ಸ್ವಲ್ಪನಿದ್ದೆ ಹತ್ತಿತ್ತು. ಅಷ್ಟರಲ್ಲಿ ನಾಯಿ ಬಗುಳಿತು! ಕತ್ತೆ ಕಿರಿಚಿತು! ಇಷ್ಟು ಹೊತ್ತಿನಲ್ಲಿ ಮನೆಯೊಳಕ್ಕೆ ಕತ್ತೆನಾಯಿಗಳು ಹೇಗೆ ಬಂದು ವೆಂದು ನಮ್ಮ ತಾತನನ್ನು ಕೂಗಿದೆ ಅದಕ್ಕಾತನು ಎದ್ದು "ಹೆದರಿ ಕೊಳ್ಳಬೇಡ, ಕತ್ತೆಯೂ ಅಲ್ಲ! ನಾಯಿಯೂ ಅಲ್ಲ! ನಾನು ಸುಮ್ಮನೆ" ಅಂದ ಅಲ್ಲಿಂದ ನಾನು ಸುಮ್ಮನೆ ಹೋಗಿ ಮಲಗಿದೆ. ಆಗ ಏನೇನು ನಡೆಯಿತೋ ನನಗೇ ಗೊತ್ತಿಲ್ಲ ಸ್ವಾಮಿಾ!

**ಅಧಿಕಾರಿ**—ಒಳ್ಳೆಯ ಅವ್ಯವಸ್ಥೆಯ ಮನುಷ್ಯರು ಸಿಕ್ಕಿದರಲ್ಲಾ! ಏನು ಸುಮಾರು ಹನ್ನೆರಡು ಘಂಟೆಗಳಿರಬಹುದೇ?

**ವೆಂಕಟಯ್ಯ**—ಇಲ್ಲ ಸ್ವಾಮಿಾ! ಇಲ್ಲ! ಅಷ್ಟು ಗಂಟೆಗಳೆಲ್ಲಿವೆ? ಒಂದೇ ಗಂಟೆ ಒಂದೇ ಗಂಟೆ, ನಮ್ಮ ಮನೆಯಲ್ಲಿ ದೇವರ ಪೂಜೆಗಾಗಿ ಇಟ್ಟು ಕೊಂಡಿರುವುದು, ನಿಜವಾಗಿಯೂ ಹನ್ನೆರಡಿಲ್ಲ. ಅಷ್ಟು ಬರೆದುಕೊಳ್ಳಬೇಡಿ, ಸ್ವಾಮಿಾ! ನಾವು ಬಡವರು.

**ಅಧಿಕಾರಿ**—ಅಯ್ಯೋ! ಹುಚ್ಚು ಪುಣ್ಯಾತ್ಮಾ! ಘಂಟೆಯಂದರೆ ದೇವರ ಪೂಜೆಯ ಘಂಟೆಯಲ್ಲವಯ್ಯಾ! ಎಷ್ಟು ಗಳಿಗೆಗಳು? ಹೇಳಿ.

**ನೀಲ**—ಅದೇನು ಗಳಿಗೆಗಳೋ! ಏನು ಮಾತ್ರೆಗಳೋ ನಮಗೆ ತಿಳಿಯದು ಸ್ವಾಮಿಾ, ಏನೋ ಸರಿಮಾಡಿ ಬರೆದುಕೊಳ್ಳಿ. ನಾವು ಬಡವರು

**ಅಧಿಕಾರಿ**—(ಆತ್ಮ) ಇವರಿಗೆ ಪ್ರಪಂಚ ವ್ಯವಹಾರ ಜ್ಞಾನವೇ ಇಲ್ಲವೆಂದು ಹೇಳೋಣವೇ? ಇವರು ವ್ಯಾಪಾರಿಗಳು ಮಹಾಯುಕ್ತಿವಂತರು! ಇರಲಿ, ಗ್ರಾಮರಕ್ಷಕನು ಹೇಳಿದಂತೆ ಅರ್ಧರಾತ್ರಿಯ ಸಮಯದಲ್ಲಿಯೇ ಕೃತ್ಯವು ನಡೆದಿರಬೇಕು. (ಬರೆದು ಕೊಳ್ಳುವನು) ಸರಿ! ಹಾಗಾದರೆ ಕಳ್ಳತನ ಮಾಡಿದವರ ಗುರುತೇನಾದರೂ ಸಿಕ್ಕಿರುವುದೋ?

**ನೀಲಗಿರಿ**— ಕಳ್ಳನೇ ಸಿಕ್ಕಿದ್ದಾನೆ ಸ್ವಾಮಿಾ ! ಸಿಕ್ಕಿದ್ದಾನೆ, ಇದೋ ನೋಡಿ ಬನ್ನಿ. (ಒಳಗೆ ಹೋಗಿ ಕಮಾಲನ ಮುಂಡವನ್ನು ಹೊರಿಸಿಕೊಂಡು ಬರುವನು.)

**ಅಧಿಕಾರಿ**—(ನೋಡಿ) ಅಯ್ಯೋ ! ಮುಂಡವು ! ಇದೇನು ?

**ವೆಂಕಟಯ್ಯ**—ಮುಂಡೆಯಲ್ಲ ಸ್ವಾಮಿಾ ! ಮುಂಡೆಯಲ್ಲ, ಗಂಡು.

**ನೀಲಗಿರಿ**— ಭಾವಾ ! ಮುಂಡೆಯಲ್ಲ ಮುಂಡ ! ಮುಂಡ !! ಸ್ವಾಮಿಾ ! ಇದು ಕಳ್ಳನ ಮುಂಡ.

**ಅಧಿಕಾರಿ**— ಕಳ್ಳನ ಮುಂಡವೇ ? ಹಾಗಾದರೆ ತಲೆಯೆಲ್ಲಿ ?

**ವೆಂಕಟಯ್ಯ**—ಅವನು ತರಲಿಲ್ಲ ಸ್ವಾಮಿಾ !

**ಅಧಿಕಾರಿ**—ತಲೆಯನ್ನು ತರಲಿಲ್ಲವೆಂದರೇನಯ್ಯಾ ?

**ವೆಂಕಟಯ್ಯ**—ನಿಜವಾಗಿಯೂ ತರಲಿಲ್ಲ ಸ್ವಾಮಿಾ ! ಗುರುತು ಸಿಕ್ಕೀತೆಂದು ತಲೆಯನ್ನು ಮನೆಯಲ್ಲಿಯೇ ಬಿಟ್ಟು ಬಂದಿರಬೇಕು ಸ್ವಾಮಿಾ ! ನಾವು ತಮ್ಮಲ್ಲಿ ಸುಳ್ಳು ಹೇಳುವೆವೇ ?

**ಅಧಿಕಾರಿ**—(ಕೋಪದಿಂದ) ಏನು ನನ್ನೊಡನೆ ವಿನೋದವಾಡುವಿರೋ ? ತಲೆಯಿಲ್ಲದವನು ಕಳ್ಳತನವನ್ನು ಹೇಗೆ ಮಾಡಿದನು ?

**ವೆಂಕಟಯ್ಯ**—ಸ್ವಾಮಿಾ, ದೇವರೇ, ಕಳ್ಳತನ ಮಾಡಲು ಕೈಗಳಿದ್ದರೆ ಸಾಕು ತಲೆಯೇತಕ್ಕೆ ಸ್ವಾಮಿಾ ?

**ನೀಲಗಿರಿ**—ಅಹುದು ಸ್ವಾಮಿಾ ! ತಲೆಯಿಲ್ಲದವರೇ ಕಳ್ಳತನ ಮಾಡುವುದು.

**ಅಧಿಕಾರಿ**—(ಆತ್ಮ) ಇವರ ಮಾತುಗಳಿಗೆ ನಾನು ನಗಲೇ ಕೋಪಿಸಿಕೊಳ್ಳಲೇ ! ಒಳ್ಳೆಯ ವಿಚಿತ್ರ ಪುರುಷು ಸಿಕ್ಕಿದರು ! ಆಗಲಿ (ಪ್ರಕಾಶಂ) ಎಲೈ ಕೈಗಳಿಂದ ಕದಿಯಲು ಕಣ್ಣುಗಳಾದರೂ ಕಾಣಬೇಡವೇನಯ್ಯ ?

**ವೆಂಕಟಯ್ಯ**—ಬೆಳಕಿನಲ್ಲಿ ಕದಿಯಲು ಕಣ್ಣುಗಳು ಬೇಕು ಕತ್ತಲಲ್ಲೇತಕ್ಕೆ ಸ್ವಾಮಿಾ ! ಕಣ್ಣು ?

**ಅಧಿಕಾರಿ**—(ನೀಲಗಿರಿಸೆಟ್ಟಿಯನ್ನು ನೋಡಿ) ಅಯ್ಯಾ ! ನೀಲಗಿರಿಸೆಟ್ಟೀ ! ಈತನು ಸ್ವಲ್ಪವೂ ಭಯವಿಲ್ಲದೆ ನನ್ನೊಡನೆ ಹುಚ್ಚನಂತೆ ಮಾತನಾ

ಡುತ್ತಿರುವನು. ನಾನೀಗಲೇ ಈತನಿಗೆ ತಕ್ಕುದನ್ನು ಮಾಡುವೆನು. ಈ ಮುಂಡದ ತಲೆಯೆಲ್ಲಿ ? ಹೇಳುವಿರೋ ಇಲ್ಲವೋ ?

**ನೀಲಗಿರಿ**— ಸ್ವಾಮಿಾ ! ಕೋಪಿಸಲಾಗದು ! ಮನೆಯಲ್ಲಿ ಕಳವಾಗಿ ಈ ಹೆಣವನ್ನು ನೋಡಿದ್ದರಿಂದ ನಮ್ಮ ಬಾವನಿಗೆ ವ್ಯಸನ ಭಯಗಳಿಂದ ಬುದ್ಧಿ ಭ್ರಾಂತಿಯಾಗಿರಬಹುದು. ತಲೆಯನ್ನು ಮಾತ್ರ ನಿಜವಾಗಿಯೂ ನಾವು ಕಂಡವರಲ್ಲ.

**ಅಧಿಕಾರಿ**—ನಾನದನ್ನು ನಂಬಲಾರೆನು, ನಿಮ್ಮ ಮನೆಯಲ್ಲಿಯೇ ಆ ತಲೆಯು ಬಿದ್ದಿರಬೇಕು ಹುಡುಕಿತನ್ನಿ.

**ನೀಲಗಿರಿ**— ನಿಜವಾಗಿಯೂ, ನಿಮ್ಮಾಣೆ ಇಲ್ಲ. ಸ್ವಾಮಿಾ ! ನೋಡಿ ತಾವೇ ಬಂದು ನೋಡಿ.

**ಅಧಿಕಾರಿ**—ಒಳ್ಳೆಯ ವಿಚಿತ್ರ ವಿಷಯವಾಯಿತೇ ! (ಸೇವಕನನ್ನು ನೋಡಿ) ಎಲವೋ ! ಆ ಬ್ರಹ್ಮಪ್ಪನವರು, ಸಿದ್ದಲಿಂಗ ಸೆಟ್ಟರು, ನಾಗಂಭಟ್ಟರು, (ಆಲೋಚಿಸಿ) ಇನ್ನೂ ಯಾರಾದರೂ ಇಬ್ಬರು ದೊಡ್ಡಮನುಷ್ಯರನ್ನು ಕರೆದುಕೊಂಡು ಬಾ ! ಪಂಚಾಯಿತಿಯಿಂದ ಈ ವಿಚಾರವು ತೀರ್ಮಾನವಾಗಬೇಕಾಗಿದೆ. (ಆಲೋಚಿಸುತ್ತ ನಿಲ್ಲುವನು)

**ಸೇವಕ**—ಅಪ್ಪಣೆ. (ಕರೆತರುವನು)

**ಪಂಚಾಯಿತರು**—(ಪ್ರವೇಶಿಸಿ ಅಧಿಕಾರಿಗಳಿಗೆ ನಮಸ್ಕರಿಸುವರು)

**ಅಧಿಕಾರಿ**—ಸ್ವಾಮಿಾ, ಬ್ರಹ್ಮಪ್ಪನವರೇ ಬನ್ನಿ ! ಈ ಸೆಟ್ಟರಮನೆಯಲ್ಲಿ ವಿಚಿತ್ರವಾದ ಕಳವಾಗಿದೆ. ಇವರ ಮನೆಯಲ್ಲಿ ಕಳ್ಳನು ಕಳವು ಮಾಡಿದ್ದಾನೆ. ಕಳ್ಳನ ತಲೆಯನ್ನು ಇವರು ಕಳವುಮಾಡಿದ್ದಾರೆ.

**ವೆಂಕಟಯ್ಯ-ನೀಲಗಿರಿ**—ಅಯ್ಯೋ ! ಇಲ್ಲ ಸ್ವಾಮಿಾ ! ನಿಜವಾಗಿಯೂ ಇಲ್ಲ ! ಇವನ ತಲೆಯನ್ನು ನಾವು ಕಾಣೆವು. ಬ್ರಹ್ಮಪ್ಪಾ ! ಸಿದ್ದಲಿಂಗಪ್ಪಾ ! ಶರಣು !! ನಮ್ಮ ಯೋಗ್ಯತೆ ನಿಮಗೆ ತಿಳಿಯದೇ ? ನಾವಂತಹ ಕೆಲಸ ಮಾಡತಕ್ಕವರೇ ?

**ಬ್ರಹ್ಮಪ್ಪ**— ಇಲ್ಲ ! ಇಲ್ಲ ! ಪಾಪ ! ಪಾಪ !! (ಸಿದ್ದಲಿಂಗಸೆಟ್ಟಿಯನ್ನು ನೋಡಿ) ಸಿದ್ದಲಿಂಗಪ್ಪಾ ! ಈ ಸೆಟ್ಟಿ ಒಬ್ಬನಿಗೆ ಒಂದು ಕಾಸಿನ ಮೇಲಿನ ಧೂಳನ್ನು ಸಹ ಕೊಟ್ಟವನಲ್ಲ. ಇವನನ್ನು ಇರುಕಿಗೆ ಸಿಕ್ಕಿಸಿಕೊಳ್ಳಲು

ಒಳ್ಳೆಯ ಸಮಯವೇ ಸಿಕ್ಕಿತು ! ಹೇಗಾದರೂಮಾಡಿ ಬಂದುದನ್ನು ಹಿರಿದು ನಮ್ಮ ಹಿಂದೆ ಪಂಚಾಯಿತಿಗಾಗಿ ಬಂದಿರುವ ಬಡವರಿಬ್ಬರಿಗೂ ಏನನ್ನಾದರೂ ಕೊಟ್ಟು ಕಳುಹಿಸೋಣ !

**ಸಿದ್ಧಲಿಂಗಪ್ಪ**—ಓಹೋ ! ಹೆಚ್ಚಾಗಿ ಬಂದರೆ ನಾವೂ ತೆಗೆದುಕೊಳ್ಳೋಣ. ಅದೇತಕ್ಕೆ ಬಿಡಬೇಕು ! (ವೆಂಕಟಯ್ಯ ಸೆಟ್ಟಿಯ ಬಳಿಗೆ ಬಂದು) ಅಯ್ಯಾ ! ಸೆಟ್ಟರೇ ! ಈಗಿನ ಸಮಯದಲ್ಲಿ ನೀವು ನಮ್ಮ ವಿಷಯ ದಲ್ಲಿ ಸರಿಯಾಗಿ ನಡೆದುಕೊಳ್ಳಬೇಕು ತಿಳಿಯಿತೋ ?

**ವೆಂಕಟಯ್ಯ**—ಸರಿಯಾಗಿಯೇ ನಡೆಯುತ್ತಾಯಿದ್ದೆ ಸಿದ್ಧಲಿಂಗಪ್ಪಾ ! ಆದರೆ ವಾಯುವಿನಿಂದ ಸೊಂಟ ಹಿಡಿದುಕೊಂಡಿದೆ ಏನುಮಾಡಲಿ ?

**ಬ್ರಹ್ಮಪ್ಪ**—ಅಯ್ಯೋ ! ಒಳ್ಳೆಯ ಉಪಾಯಗಾರನಯ್ಯಾ ನೀನು! ಸರಿಮಾ ಡಿಕೊಳ್ಳಬೇಕೆಂಪರೆ ಸ್ವಲ್ಪ ಕೈಯನ್ನು ಬೆಚ್ಚಗೆ ಮಾಡಬೇಕು ! ಬಲ್ಲೆಯೋ ?

**ವೆಂಕಟಯ್ಯ**—ಓಹೋ ! ಆಗಲಿ ! ಅದಕ್ಕೇನು ಆಗಲಿ, (ಗಟ್ಟಿಯಾಗಿ) ಎಲೋ ಪಟ್ಟಾಬೀ ! ನಮ್ಮ ದನವ ಕೊಟ್ಟಿಗೆಯಲ್ಲಿ ಸ್ವಲ್ಪ ನೆಲ್ಲುಹು ಲ್ಲನ್ನೂ ಬೆಂಕಿಕಡ್ಡಿಯನ್ನೂ ಬೇಗ ತಗದುಕೊಂಡು ಬಾರೋ.

**ಬ್ರಹ್ಮಪ್ಪ**—ಏತಕ್ಕಯ್ಯ ನೆಲ್ಲುಹುಲ್ಲೂ ಬೆಂಕಿಯ ಕಡ್ಡಿಗಳು ?

**ವೆಂಕಟಯ್ಯ**—ನಿಮ್ಮ ಕೈಯನ್ನು ಬೆಚ್ಚಗೆ ಮಾಡುವುದಕ್ಕೆ !

**ಸಿದ್ಧಲಿಂಗ**—ಆಗಬಹುದಯ್ಯಾ ! ಒಳ್ಳೆಯ ಪುಣ್ಯಾತ್ಮ ! ಕೈ ಬೆಚ್ಚಗೆ ಮಾಡುವುದೆಂದರೆ ಕೈಗೆ ಬೆಂಕಿಯಿಡುವುದೇ ! ನಿನ್ನಂಥವರಿಗೆ ಉಪಕಾ ರಮಾಡಲು ಬಂದರೆ ಕೈಗೆ ಬೆಂಕಿ , ಕಣ್ಣಿಗೆ ನೀರು ! ಬಾಯಿಗೆ ಮಣ್ಣು ! ಇಷ್ಟು ತಾನೆ ! ಚಿಂತೆಯಿಲ್ಲ ನಾವು ಹೋಗುವೆವು. ಆ ಹುಡುಗನನ್ನು ನೀವೇ ಕೊಂದಿರೆಂದು ನಿಮಗೇ ಶಿಕ್ಷೆಯಾಗಲಿ ನಮಗೇನು !

**ನೀಲಗಿರಿ**—ಅಯ್ಯೋ ಸಿದ್ಧಲಿಂಗಪ್ಪ ! ಬೇಡಪ್ಪ ! ಈಗ ಏನು ಮಾಡಬೇಕು ಹೇಳಪ್ಪ.

**ಬ್ರಹ್ಮಪ್ಪ**—ಹೇಳುವುದೇನು ! ನಿಮಗೆ ಶಿಕ್ಷೆ ತಪ್ಪಬೇಕಾದರೆ, ಈಗ ಸಿದ್ಧ ಲಿಂಗಪ್ಪನವರ ವಶಕ್ಕೆ ಇಪ್ಪತ್ತು ವರಹಗಳನ್ನು ಕೊಡಿ. ಇಲ್ಲವಾದರೆ

ನೀವುಂಟು ಅಧಿಕಾರಿಗಳುಂಟು; ಅವರು ಮಾಡಿದ ಶಿಕ್ಷೆಯನ್ನು ನೀವು ಅನುಭವಿಸಿ.

**ವೆಂಕಟಯ್ಯ**—ಅಯ್ಯೋ ಬ್ರಹ್ಮಪ್ಪಾ! ಹಣವೆಲ್ಲಿದೆಯಪ್ಪಾ! ಕಳ್ಳರು ಬಿದ್ದ ಮನೆಯಲ್ಲಿ ಹಣವೆಲ್ಲಿ ಬರಬೇಕಪ್ಪಾ?

**ಬ್ರಹ್ಮಪ್ಪ**—ಸರಿ, ಹಾಗಾದರೆ ಶಿಕ್ಷೆಯನ್ನೆ ಅನುಭವಿಸಿ, ನಮಗೇನು!

**ವೆಂಕಟಯ್ಯ**—ಇಲ್ಲವಪ್ಪಾ! ಹಾಗಾದರೆ ನಿನ್ನಲ್ಲಿದ್ದರೆ ಕೊಟ್ಟೆರು. ಕಳವಾದ ಪದಾರ್ಥಗಳು ಸಿಕ್ಕಿದ ಮೇಲೆ ನಾನು ನಿನಗೆ ಕೊಡುವೆನು.

**ಬ್ರಹ್ಮಪ್ಪ**—(ಆತ್ಮಗತ) ಎಂತಹ ಉಪಾಯಗಾರ!

**ಸಿದ್ಧಲಿಂಗಪ್ಪ**—ಅಯ್ಯಾ! ಸೆಟ್ಟರೇ! ನೀವು ನಮ್ಮೊಡನೆ ವಿನೋದವಾಡು ವಂತಿದೆ, ಈಗ ಹಣವನ್ನು ಕೊಟ್ಟರೆ ಸಮ ಇಲ್ಲವಾದರೆ, ನೀವೇ ಈ ಕೊಲೆಗೆ ಕಾರಣವೆಂದು ತೀರ್ಮಾನವಾಗುವದೇನೋ ನಿಜ. ಅನಂತರ ಆದುದನ್ನು ಅನುಭವಿಸಿ

**ನೀಲಗಿರಿ**—ಅಯ್ಯೋ! ಅಯ್ಯೋ! ಬೇಡವಪ್ಪಾ! (ವೆಂಕಟಯ್ಯನನ್ನು ನೋಡಿ) ಬಾವಾ! ವೆಂಕಟಯ್ಯ ಬಾವಾ! ನಿನ್ನಲ್ಲಿರುವಷ್ಟು ಹಣವನ್ನಾದರೂ ಕೊಟ್ಟುಬಿಡಪ್ಪಾ!

**ವೆಂಕಟಯ್ಯ**—ಅಯ್ಯೋ! ನಮ್ಮ ಸಂಕಟವನ್ನು ನಾವೇ ಬಲ್ಲೆವು, ಇದ್ದುದನ್ನು ಕಳೆದುಕೊಂಡು ಇನ್ನೂ ಈಗ ಹಣವನ್ನು ಎಲ್ಲಿಂದ ತರಲಿ? (ಅಳುತ್ತ ಚೀಲದಿಂದ ಮೂರು ವರಹಗಳನ್ನು ತೆಗೆದು ಕೊಡುವನು.)

**ಬ್ರಹ್ಮಪ್ಪ**—ಅಯ್ಯಾ! ಸೆಟ್ಟರೇ, ನಾವೇನು ನಿಮ್ಮಲ್ಲಿಗೆ ತಿರುಪಕ್ಕೆ ಬಂದೆವೆಂದು ತಿಳಿದಿರೋ?

**ವೆಂಕಟಯ್ಯ**—(ಆತ್ಮ) ತಿರುಪದ ತಾತ! (ಅಳುತ್ತ ಬ್ರಹ್ಮಪ್ಪನನ್ನು ನೋಡಿ) ಬ್ರಹ್ಮಪ್ಪಾ! ಬ್ರಹ್ಮಪ್ಪಾ, ಮನೆಯಲ್ಲಿ ಕಳವಾಗಿರುವುದು, ಇದನ್ನು ನೀನೂ ಬಲ್ಲೆ! ಇದ್ದುದೆಲ್ಲವನ್ನೂ ಕಳೆದುಕೊಂಡು ಇನ್ನು ಹಣವನ್ನು ಎಲ್ಲಿಂದ ತರಲಿ? ಇದ್ದ ಮೂರು ವರಹಗಳನ್ನೂ ನಿನಗೇ ಕೊಟ್ಟುಬಿಟ್ಟೆನಲ್ಲಪ್ಪಾ!! (ಅಳುವನು.)

**ಬ್ರಹ್ಮಪ್ಪ**—ಅದೆಲ್ಲವನ್ನೂ ಹೇಳಬೇಡಿ, ಈಗ ಮೊದಲು ಹಣವನ್ನು ಕೊಟ್ಟರೆ ನಿಮಗೆ ಅನುಕೂಲವಾಗಿ ತೀರ್ಮಾನ ಮಾಡಿಸುತ್ತೇವೆ. ಇಲ್ಲವಾದರೆ

ಅದಕ್ಕೆ ತಕ್ಕಂತೆ ಅಧಿಕಾರಿಗಳಿಗೆ ಹೇಳುತ್ತೇನೆ. ಆ ಮೇಲೆ ನಿಮ್ಮ ಅದೃಷ್ಟ ಹೇಗಿರುವುದೋ !

**ವೆಂಕಟಯ್ಯ**—(ಕಾತರದಿಂದ) ಬೇಡ ಬ್ರಹ್ಮಪ್ಪಾ ! ಹಾಗೆ ಮಾಡಬೇಡಿ ಬ್ರಹ್ಮಪ್ಪಾ !

**ಸಿದ್ಧಲಿಂಗಪ್ಪ**—(ಮೆಲ್ಲನೆ) ಬ್ರಹ್ಮಪ್ಪನವರೇ ನೀವು ಕೇಳಿದಷ್ಟು ಹಣವನ್ನು ಅವನು ಕೊಡಲಿಲ್ಲ ! ಈ ಕಥೆಯು ಪೂರಯಿಸಲಿಲ್ಲ ! ಇನ್ನು ಏಳೆಂಟು ವರಹಗಳನ್ನು ಹೇಗಾದರೂಮಾಡಿ ಎಳೆದರೆ ಸಾಕು

**ಬ್ರಹ್ಮಪ್ಪ**—ಆಗಲಿ, ಸೆಟ್ಟರೇ ! ಪಾಪ !! ನೀವು ಬಹಳ ನೊಂದಿರುವಿರಿ, ಇನ್ನು ಪತ್ತು ವರಹಗಳನ್ನು ಕೊಟ್ಟುಬಿಡಿ ಸಾಕು.

**ವೆಂಕಟಯ್ಯ**—(ಅಳುತ್ತ) ಎಲ್ಲಿಂದ ತರಲಪ್ಪಾ ! ರಾಮರಾಮಾ ! ಹರಿ, ಹರೀ !! (ಸೊಂಟದ ಬೇರೆಬೇರೆ ಕಡೆಗಳಿಂದಲೂ ರುಮಾಲಿನ ಕೊನೆಯಿಂದಲೂ ಹಣವನ್ನು ಸ್ವಲ್ಪಸ್ವಲ್ಪವಾಗಿ ತೆಗೆದು ಏಳು ವರಹಗಳನ್ನು ಕೊಡುವನು )

**ಬ್ರಹ್ಮಪ್ಪ**—ಪುಣ್ಯಾತ್ಮನಲ್ಲಿ ಹತ್ತು ವರಹವನ್ನು ಹೊರಡಿಸಲು ಇಷ್ಟು ಪ್ರಯತ್ನವಾಯಿತು ಇನ್ನೇನೂ ಹೊರಡುವಂತೆಯಿಲ್ಲ (ಅಧಿಕಾರಿಯ ಬಳಿಗೆ ಬಂದು) ಸ್ವಾಮೀ ! ಇವರು ಈ ಊರಲ್ಲಿ ಗೌರವಶಾಲಿಗಳಾದ ವ್ಯಾಪಾರಿಗಳು, ಇವರ ಮನೆಯಲ್ಲಿ ನಿನ್ನೆಯ ರಾತ್ರಿ ವಿಚಿತ್ರವಾದ ಕಳವು ನಡೆದು, ತಲೆಯಿಲ್ಲದ ಮುಂಡವು ಬಿದ್ದಿರುವುದೆಂದು ನಮಗೆ ಬೆಳಗಾಗುತ್ತಲೇ ತಿಳಿಯಿತು ಇವರಿಂದ ಈ ಪ್ರಾಣಹತ್ಯವು ಎಂದಿಗೂ ನಡೆದಿಲ್ಲ ಇವನೇ ಕಳ್ಳನು ; ಇವನ ಕಡೆಯವರು ಗುರುತು ಸಿಕ್ಕೀತೆಂಬ ಭಯದಿಂದ ಇವನ ತಲೆಯನ್ನು ಕಡಿದುಕೊಂಡು ಹೋಗಿರಬೇಕು. ಈ ಮುಂಡವು ಯಾರದೆಂಬುದು ತಿಳಿಯದು, ಅದನ್ನು ತಿಳಿಯಲು ಪ್ರಯತ್ನಿಸಿದರೆ ಈ ಕಳವಿನ ವಿಚಾರಗಳೆಲ್ಲವೂ ವ್ಯಕ್ತವಾಗುವವು. ಸೆಟ್ಟಿಯು ಪಾಪ ! ಬಹಳ ನಷ್ಟಕ್ಕೆ ಸಿಕ್ಕಿರುವನು, ಆತನು ಕಳೆದುಕೊಂಡಿರುವ ವಸ್ತುಗಳೆಲ್ಲವನ್ನೂ ತಾವು ಹುಡುಕಿಸಿಕೊಡಬೇಕು.

ಉಳಿದಪಂಚಾಯಿತರು—ಅಹುದು ಮಹಾಸ್ವಾಮಿ! ನಿಜ! ತಾವು ಅಷ್ಟು ಉಪಕಾರ ಮಾಡಬೇಕು.

ಅಧಿಕಾರಿ—ಹಾಗಾದರೆ ಈ ಮುಂಡವನ್ನು ಜನಗಳು ಬಹಳವಾಗಿ ಸಂಚರಿಸುವ ಗಂಗಾತೀರದಲ್ಲಿ ಎಲ್ಲರಿಗೂ ಕಾಣುವಂತೆ ಒಂದು ಮರಕ್ಕೆ ಕಟ್ಟಿಸಿರೋಣ, ಆಗ ಅದನ್ನು ನೋಡಿ ಯಾರಾದರೂ ಊಹಿಸಿದರೆ ನಮಗೆ ಈ ಕಳವಿನ ವಿಚಾರವು ತಿಳಿಯಲು ಅನುಕೂಲವಾಗುವುದು.

ಬ್ರಹ್ಮಪ್ಪ—ಆಗಲಿ ಸ್ವಾಮಿ, ಬಹಳ ಸಂತೋಷ ದಯವಿಟ್ಟು ಹಾಗೆ ಮಾಡಿ. ಸಟ್ಟೆಯು ಕಳೆದುಕೊಂಡಿರುವ ವಸ್ತುಗಳನ್ನು ಮಾತ್ರ ಹೇಗಾದರೂ ದುಡುಕಿಸಿ ಕೊಡಬೇಕು

ಅಧಿಕಾರಿ—ಆಗಲಿ (ವೆಂಕಟಯ್ಯ ಸೆಟ್ಟಿಯನ್ನು ನೋಡಿ) ಅಯ್ಯಾ ಸೆಟ್ಟರೇ! ನೀವು ಕಳೆದುಕೊಂಡ ಪದಾರ್ಥಗಳು ಯಾವವು?

ವೆಂಕಟಯ್ಯ—ಸ್ವಾಮಿ! ಹದಿನಾಲ್ಕು ಅಕ್ಕಿಯ ಚೀಲಗಳು, ಹತ್ತು ಬೆಲ್ಲದ ಗೋಣಿ, ಆರು ತುಪ್ಪದ ಡಬ್ಬ, ಎರಡು ಮೆಣಸಿನಕಾಯಿ ಚೀಲ, ಮೂರು ಸಕ್ಕರೆಯ ಚೀಲ, ಮುನ್ನೂರು ಚಿನ್ನದ ವರಹಗಳನ್ನು ಇಟ್ಟಿದ್ದ ಪೆಟ್ಟಿಗೆ. ಇಷ್ಟೆ ಮಹಾಸ್ವಾಮಿ! (ಅಳುವನು)

ಅಧಿಕಾರಿ—(ಬೆರಗುಗೊಂಡು) ಓಹೋ! ಬಹಳ ಬೆಲೆ ಬಾಳುವ ವಸ್ತುಗಳೇ ಹೋಗಿರುವವು! ಆಗಲಿ. ಈ ಮುಂಡದ ಮೂಲಕ ಕಳ್ಳರನ್ನು ಕಂಡುಹಿಡಿದು ನಿಮ್ಮ ವಸ್ತುಗಳನ್ನು ಸಾಧ್ಯವಾದ ಮಟ್ಟಿಗೆ ಹುಡುಕಿ ಕೊಡುವೆವು!! ಈ ಪಟ್ಟಿಗೆ ನಿಮ್ಮ ಹೆಸರಿನ ಕೈ ಬರಹಗಳನ್ನು ಹಾಕಿ

ವೆಂಕಟಯ್ಯಸೆಟ್ಟಿ-ನೀಲಗಿರಿಸೆಟ್ಟಿ—ಆಗಲಿ, ಸ್ವಾಮಿ! ಶರಣು. (ಕೈ ಬರಹಗಳನ್ನು ಮಾಡುವರು)

(ಅಧಿಕಾರಿ ಗ್ರಾಮರಕ್ಷಕರೂ ಪಂಚಾಯಿತರೂ ಸಹ ಹೋಗುವರು.)

ನೀಲಗಿರಿ—ವೆಂಕಟಯ್ಯ ಬಾವಾ! ನಮ್ಮ ಮನೆಯಲ್ಲಿ ಹೋದ ಪದಾರ್ಥಗಳೇನು?

**ವೆಂಕಟಯ್ಯ**—(ನಕ್ಕು) ಏ....ನೂ ಕಾಣೆನಪ್ಪ! ಸ್ವಲ್ಪ ಅಕ್ಕಿ, ಬೇಳೆ, ಸ್ವಲ್ಪ ರವೆ, ಸ್ವಲ್ಪ ಸಕ್ಕರೆ ಹೋದಂತೆಯಿತ್ತು. ಅದು ನಮ್ಮ ಮನೆಯಲ್ಲಿ ಮಕ್ಕಳು ಚೆಲ್ಲುವ ಪದಾರ್ಥಗಳ ಬೆಲೆಯಿಲ್ಲ.

**ನೀಲಗಿರಿ**—ಹಾಗಾದರೆ ಅಷ್ಟು ಪದಾರ್ಥಗಳನ್ನೇತಕ್ಕೆ ಹೇಳಿದೆ?

**ವೆಂಕಟಯ್ಯ**—ನಾನು ಪದಾರ್ಥಗಳನ್ನೆಲ್ಲಿ ಹೇಳಿದೆ! ಗೋಣಿಯ ಚೀಲ, ಡಬ್ಬ, ಹಳೆಯ ಪೆಟ್ಟಿಗೆ ಹೋಯಿತು, ಎಂದು ಹೇಳಿದೆ. ಅಷ್ಟೆ!

**ನೀಲಗಿರಿ**—ಅವುತಾನೇ ಎಲ್ಲಿ ಹೋಗಿವೆ? ಇಲ್ಲವಲ್ಲಾ!

**ವೆಂಕಟಯ್ಯ**—ಇದೇನು ಬಾವಾ! ಹೋದವರ್ಷ ಸಂತೆಯಿಂದ ಊರಿಗೆ ಬರುವಾಗ ಹಳೆಯ ಗೋಣಿಯ ಚೀಲಗಳೂ, ಹಳೆಯ ಡಬ್ಬಗಳೂ, ಒಂದು ಹಳೆಯಪೆಟ್ಟಿಗೆ, ಇವೆಲ್ಲವೂ, ಮಳೆ ಬಂದು, ನೆನೆದು ಚೀಲಗಳು ಮುಗ್ಗಿ ಹೋದವು! ಡಬ್ಬಗಳು ತುಕ್ಕು ಹಿಡಿದು ತೂತುಬಿದ್ದವು! ಪೆಟ್ಟಿಗೆ ಹಲಗೆ ಬಿಚ್ಚಿಕೊಂಡು ಹೋಯಿತು! ಇಲ್ಲವೇ? ನೀನು ಕಾಣೆಯಾ?

**ನೀಲಗಿರಿ**—ನಿಜ! ಹಾಗಾದರೆ ಅವುಗಳನ್ನು ಈಗ ಏತಕ್ಕೆ ಹೇಳಿದೆ?

**ವೆಂಕಟಯ್ಯ**—"ಕಳೆದು ಹೋದ ಪದಾರ್ಥಗಳು ಯಾವವು?" ಎಂದು ಕೇಳಿದರು, ಆದರಿಂದ ಹೇಳಿದೆನು.

**ನೀಲಗಿರಿ**—ಹಾಗಾದರೆ ಹಳೆಯಪೆಟ್ಟಿಗೆ ಹೋದರೆ ಚಿನ್ನದ ವರಹಗಳಿಟ್ಟಿದ್ದ ಪೆಟ್ಟಿಗೆಯೆಂದು ಹೇಳಿದೆಯಲ್ಲಾ!

**ವೆಂಕಟಯ್ಯ**—ಇದೇನು ಬಾವಾ! ನಮ್ಮ ಮುತ್ತಾತ ಆ ಪೆಟ್ಟಿಗೆಯಲ್ಲಿ ಮುನ್ನೂರು ವರಹಗಳನ್ನಿಟ್ಟಿದ್ದನಂತೆ, ನೀನು ಕೇಳಿರಲಿಲ್ಲವೇ? ಆದರಿಂದ ನಾನು ಹಾಗೆ ಹೇಳಿದೆನು

**ನೀಲಗಿರಿ**—ಬಹಳ ಒಳ್ಳೆಯ ಕೆಲಸ ಮಾಡಿದೆ!!

**ವೆಂಕಟಯ್ಯ**—ನಾನೇನೋ! ಇದ್ದುದನ್ನು ನಿಜವಾಗಿ ಹೇಳಿಬಿಟ್ಟಿದ್ದೇನಪ್ಪ! ಅಧಿಕಾರಿಗಳು ಹೆಚ್ಚಾಗಿ ಪದಾರ್ಥಗಳಿನ್ನು ತರಿಸಿ ಕೊಟ್ಟರೆ ನಮ್ಮ ಪುಣ್ಯ! ಬಾ ಹೋಗೋಣ. (ಹೋಗುವರು.)

ದೃಶ್ಯ ೧೦ (ವೀಧಿಯಲ್ಲಿ ಲಿಂಗನು ಅನೇಕ ಪತ್ರಗಳನ್ನು ಹಿಡಿದು ಪ್ರವೇಶಿಸುವನು.)

**ಲಿಂಗ**—ಆ ಕಾಕೋದರನ ತಂತ್ರಗಳ ಮೂಲವನ್ನೇ ಕಂಡುಹಿಡಿಯಲಾಗು ವುದಿಲ್ಲ. ಮೊದಲು ಆ ಕಬೀರದಾಸನ ಮನೆಯ ಪಕ್ಕದಲ್ಲಿ ರತ್ನಾಭರ ಣಗಳ ಅಂಗಡಿಯನ್ನು ಇಡಿಸುವಂತೆ ಆ ರತ್ನಾಕರನಿಗೆ ಹೇಳಿ ಸಾವಿ ರಾರುವರಹಗಳ ವೆಚ್ಚದಿಂದ ಅಂಗಡಿಯನ್ನಿಡಿಸಿದನು. ಆ ಹುಚ್ಚನು ಇವನು ಕುಣಿಸಿದ ಹಾಗೆಲ್ಲ ಕೋತಿಯಂತೆ ಕುಣಿಯುತ್ತಿರುವನು ಪರ್ಯ ವಸಾನವೇನಾಗುವುದೋ ಕಾಣೆನು. ಈಗಲಾದರೋ ಆ ಕಬೀರನ ಪತ್ನಿಯಲ್ಲಿಯೇ ಚಿತ್ತವನ್ನಿಟ್ಟು ನಿದ್ರಾಹಾರಗಳನ್ನು ತೊರೆದು ತಲ್ಲಣಿ ಸುತ್ತಿರುವ ಆ ರತ್ನಾಕರನು, ಈ ಮೋಸಗಾರನು ಮಾಡುತ್ತಿರುವ ಆಲೋಚನೆಗಳೆಲ್ಲಕ್ಕೂ ಕಿವಿಯನ್ನು ಜೋಲುಹಾಕುತ್ತಿರುವನು. ಈಗ ನನ್ನ ಕೈಗೆ ರತ್ನಾಕರನು ಕೊಟ್ಟನೆಂದು ಆ ಕಾಕೋದರನು, ಅಂಚೆಗೆ ಹಾಕಲು ಈ ಪತ್ರಗಳನ್ನು ಕೊಟ್ಟಿರುವನು. ಹೀಗೆ ನೂರಾರು ಪತ್ರಗ ಳನ್ನು ಏಕಕಾಲದಲ್ಲಿ ಈವರೆಗೂ ಒಂದು ದಿನವಾದರೂ ಬರೆದಿರಲಿಲ್ಲ. ಈಗ ಈರೀತಿ ಬರೆದಿರಲು ಪ್ರಬಲವಾದ ಕಾರಣವೇನಿರಬಹುದು ! ಯಾರಯಾರಿಗೆ ಪತ್ರಗಳನ್ನು ಬರೆದಿರುವನೋ ನೋಡುವೆನು (ವಿಳಾ ಸಗಳನ್ನೋದುತ್ತ) ಓಹೋ ! "ಬ್ರಹ್ಮಾನಂದ ಸ್ವಾಮಿಗಳವರ ಸನ್ನಿ ಧಿಗೆ, ಬ್ರಹ್ಮಚೈತನ್ಯ ಸ್ವಾಮಿಗಳವರಿಗೆ, ನಿತ್ಯಾನಂದ ಸ್ವಾಮಿಗಳವರಿಗೆ, ಜ್ಞಾನಜ್ಯೋತಿ ಸ್ವಾಮಿಗಳವರಿಗೆ, ಸಚ್ಚಿದಾನಂದ ಸ್ವಾಮಿಗಳವರಿಗೆ, ಆತ್ಮಾನಂದ ಸಾಧುಗಳವರಿಗೆ, ಭರತಖಂಡದಲ್ಲಿರುವ ಮುಖ್ಯಮುಖ್ಯ ರಾದ ಸಾಧುಗಳಿಗೆಲ್ಲರಿಗೂ ಬರೆದಿರುವನು ! ವಿಷಯವೇನಿರಬಹುದು ! ಒಂದುವೇಳೆ ಈ ಕಾಕೋದರನು ನನ್ನ ಒಡೆಯನಿಗೆ ದ್ರೋಹಚಿಂತನೆ ಯನ್ನೇನಾದರೂ ಮಾಡಿ, ತಾನೇ ಇಷ್ಟು ಪತ್ರಗಳನ್ನು ಬರೆದಿರಬ ಹುದೇ ? ಅವನಿಗೆ ಪ್ರಯೋಜನವಾಗುವುದಾದರೆ, ಅವನು ಯಾರಿಗೆ ಬೇಕಾದರೂ ದ್ರೋಹಮಾಡಿ ಅವರನ್ನು ಮುಳುಗಿಸಿ ಬಿಡಬಲ್ಲನು. ಇದರಿಂದ ನನ್ನ ಸ್ವಾಮಿಗೆ ಕೆಡುಕಾಗದಂತೆ ನೋಡಿಕೊಳ್ಳುವುದು ಭೃತ್ಯನಾದ ನನ್ನ ಕರ್ತವ್ಯವು. ಆದಕಾರಣ ಒಂದು ಪತ್ರವನ್ನು

ಮೆಲ್ಲನೆ ಒಡೆದು ನೋಡುವುದರಲ್ಲಿ ದೋಷವೇನು ? ವಿಷಯವನ್ನೋದಿ ಕೊಂಡು ಮತ್ತೆ ಹಾಗೆಯೇ ಅದನ್ನು ಭದ್ರಪಡಿಸಿ ಅಂಚೆಗೆ ಕೊಡು ವೆನು. (ಪತ್ರವನ್ನು ಬಿಚ್ಚಿ ಓದುವನು.) "ಶ್ರೀರಾಮಚಂದ್ರ ಸೇವಾ ಧುರೀಣರಾದ ಸಾಧುಮಹನೀಯರು ಶಾರದಾನಂದ ಸಾಧುಗಳವರ ಸನ್ನಿಧಿಯಲ್ಲಿ, ಸಾಧು ಪಾದ ಸೇವಕನಾದ ಕಬೀರನ ವಿಜ್ಞಾಪನೆಗಳು. ಈ ಚೈತ್ರ ಶುದ್ಧ ನವಮಿ ಮೊದಲಾಗಿ ಶ್ರೀರಾಮ ನವರಾತ್ರೀಮಹೋ ತ್ಸವವನ್ನು ನಡೆಯಿಸಬೇಕೆಂದು ಶ್ರೀರಾಮಚಂದ್ರ ಪ್ರೇರಣೆಯಾಗಿರುವು ದರಿಂದ ಮಹನೀಯರಾದ ತಾವುಗಳು ಎರಡುದಿನಗಳು ಮುಂಚಿತವಾಗಿ ದಯಮಾಡಿಸಿ ಶ್ರೀರಾಮ ಸೇವಾ ಕಾರ್ಯದಲ್ಲ ಭಾಗಿಗಳಾಗಿ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕಾಗಿ ಬೇಡಿಕೊಳ್ಳುತ್ತೇನೆ. ಇತಿ ಸಾಧು ಪಾದ ಸೇವಕ ಕಬೀರನ ವಿಜ್ಞಾಪನೆಗಳು." ಎಂದು ಬರೆದಿರುವುದು. ಆಹಾ ! ಕಬೀರನು ಬಹಳ ಬಡವನು ! ದೇಶದೇಶಗಳ ಮಹನೀಯ ರನ್ನೂ ಬರಮಾಡಿ ರಾಮ ನವರಾತ್ರಿಯ ಉತ್ಸವವನ್ನು ನಡೆಯಿಸುವ ಶಕ್ತಿಯು ಅವನಿಗಿಲ್ಲ ಇದನ್ನರಿತು ಉತ್ಸವವೆಂಬ ವ್ಯಾಜದಿಂದ ಮಹನೀಯರೆಲ್ಲರನ್ನೂ, ಅವನ ಹೆಸರಿನಿಂದ ಪತ್ರಗಳನ್ನು ಬರೆದು ಕರೆಯಿಸಿದಲ್ಲಿ ಆಗ ಕಬೀರನು ಅವಮಾನಪಡುವನು. ಆಗ ತಾವು ಸಹಾಯಮಾಡುವಂತೆ ನಟಿಸಿ ಅವನನ್ನು ಬಲೆಗೆ ಸಿಕ್ಕಿಸಿಕೊಂಡು ಹೇಗಾದರೂ ಅವನ ಪತ್ನಿಯನ್ನು ವಶಪಡಿಸಿಕೊಳ್ಳಬೇಕೆಂಬ ಉದ್ದೇಶ ದಿಂದಲೋ ಅಥವಾ ಮತ್ತೆ ಯಾವ ಉದ್ದೇಶದಿಂದಲೋ ಇವರಿಬ್ಬರೂ ಈ ಕಾರ್ಯವನ್ನು ಮಾಡಿರಬೇಕೆಂದು ತೋರುವುದು. ಕಬೀರನು ದೈವ ಭಕ್ತನಾದುದರಿಂದ ಅವನಿಗೆ ದೈವ ಸಹಾಯವಿರಲೇಬೇಕು ! ನಾನಾ ದರೋ ಭೃತ್ಯಧರ್ಮದಿಂದ ಸ್ವಾಮ್ಯಾಜ್ಞೆಯಂತೆ ನಡೆಯುವುದು ಕರ್ತ ವ್ಯವು. ಆದುದರಿಂದ ಈ ಪತ್ರಗಳನ್ನು ಅಂಚೆಗೆ ಕೊಟ್ಟುಬಿಡುವೆನು ; ಮುಂದೆ ಏನೇನು ವಿಚಿತ್ರಗಳು ನಡೆಯುವುವೋ ನೋಡುವ.

(ಹೋಗುವನು.)

(ದೃಶ್ಯ ೧೧ ರತ್ನಾಕರನ ಕಿರುಮನೆಯ ಬಳಿಯಲ್ಲಿ ಮಧುಮೋಹಿನಿಯು ಪ್ರವೇಶಿಸುವಳು.)

**ಮಧುಮೋಹಿನಿ**—ರತ್ನಾಕರನು ನನ್ನ ಮನೆಗೆ ಬರುವೆನೆಂದು ಅಷ್ಟು ವಿಧವಾಗಿ ನಂಬಿಕೆಯನ್ನು ಹೇಳಿದ್ದನು. ಈವರೆಗೂ ಅವನ ಸುಳಿವೇ

ಇಲ್ಲ. ನಾನು ಆತನನ್ನು ಕಾಣಲು ಹೋದಾಗಲೆಲ್ಲವೂ ಆ ಹಾಳು ಕಾಕೋದರನು ಅವನ ಬಳಿಯಲ್ಲಿಯೇ ಇರುವನು. ಹಾಗಿದ್ದರೂ, ನಮ್ಮ ಅಂತರ್ಯವು ಕಾಕೋದರನಿಗೆ ತಿಳಿಯದ ಕಾರಣ ನಾನು ಆತನಮುರಲ್ಲಿ ಸಾಮಾನ್ಯವಾಗಿ ಪ್ರಶ್ನೆಮಾಡಿದರೆ, ರತ್ನಾಕರನು ಅತ್ಯಾಪ್ತನಂತೆ ನಟಿಸುತ್ತ ಏನಾದರೂ ಒಂದು ಯುಕ್ತಿಯ ಸಮಾಧಾನವನ್ನು ಹೇಳಿ ಕಳುಹಿಸುತ್ತಿರುವನು. ಸದಾಕಾಲದಲ್ಲಿಯೂ ನನ್ನ ಮನೆಯಲ್ಲಿಯೇ ಇರುತ್ತಿದ್ದವನು, ನಾನು ನೂರಾವೃತ್ತಿ ಬಂದು ಬೇಡಿಕೊಂಡರೂ ಒಂದು ಸಲವಾದರೂ ನನ್ನ ಮನೆಗೆ ಬಾರದಿರುವುದನ್ನು ನೋಡಿದರೆ ಅವನಿಗೆ ನನ್ನಲ್ಲಿ ಅಸಮಾಧಾನವೋ, ಅನ್ಯಕಾಂತೆಯಲ್ಲಿ ಆಸಕ್ತಿಯೋ, ಅಥವಾ ಎರಡೂನೋ ಒದಗಿರಬೇಕೆಂದು ಸ್ಪಷ್ಟವಾಗಿರುವುದು, ಇರಲಿ, ಈಗಲೂ ಒಂದಾವೃತ್ತಿ ಹೋಗಿ ಅವನ ಮನವನ್ನು ಪರೀಕ್ಷಿಸುವೆನು. (ಮುಂದೆ ಬಂದು ಮರೆಯಲ್ಲ ನಿಲ್ಲುವಳು)

**ರತ್ನಾಕರ**—೨೮ ಕಂ|| ಚತುರಾಸ್ಯಂ ಸೃಷ್ಟಿ ಕಳಾ |
ಚತುರತೆಯುನದೆಲ್ಲಮುಂ ಪ್ರಯೋಗಿ ಸುಕವಳಂ||
ರತಿ ರಂಭಾದ್ಯರ ರೂಪದಿ |
ನತಿಶಯಮೆನೆ ರಚಿಸಿ ಚತುರನೆನಿಸಿಹ ನಲ್ತೇ |

ಆಹಾ! ಮನೋಹರೇ! ಯಾವಾಗ ಬಂದು ಈ ನನ್ನ ಅಂತಃಪುರವನ್ನಲಂಕರಿಸಿ ನನ್ನನ್ನು ಧನ್ಯನನ್ನಾಗಿ ಮಾಡುವೆ? ಆಹಾ! ನಿನ್ನ ದಿವ್ಯ ಸುಂದರಾಕೃತಿಯು ನನ್ನ ಚಿತ್ತವನ್ನು ಸೇರಿ ನನಗೆ ನಿದ್ರಾಹಾರಾದಿಗಳ ಆಸಕ್ತಿಯನ್ನು ತಪ್ಪಿಸಿರುವುದಲ್ಲಾ! ನನ್ನ ಮನವನ್ನಪಹರಿಸಿದ ಜಗನ್ಮೋಹಿನಿಯೇ! ನಾನು ನಿನ್ನನ್ನು ಸ್ಮರಿಸದಿರುವ ಕ್ಷಣವೇ ಇಲ್ಲವಲ್ಲಾ! ಹೀಗಿದ್ದರೂ ನನ್ನನ್ನೇತಕ್ಕೆ ಅನಾದರಣೆ ಮಾಡಿರುವೆ?

**ಮಧುಮೋಹಿನಿ**—(ಕೇಳಿ) ಸರಿ! ಸರಿ! ನನ್ನ ಊಹೆಯು ನಿಜವೇ! ನಿಜವೇ!! ಇವನು ಯಾವಳೋ ಪರಕಾಂತೆಯಲ್ಲಿ ಆಸಕ್ತನಾಗಿರುವುದರಿಂದಲೇ ನನ್ನನ್ನು ದೂರೀಕರಿಸಿರುವನು! ಆ ಸ್ತ್ರೀಯು ಯಾರಿರಬಹುದು!!

**ಕಾಕೋದರ**—(ಪ್ರವೇಶಿಸಿ) ಮಿತ್ರಾ !

**ರತ್ನಾಕರ**—ಏನಯ್ಯಾ ! ಹೀಗೆ ಮಾಡಿದೆ ? ಆ ಸುಂದರಿಗಾಗಿ ಬೇರೆ ಪ್ರಯತ್ನಗಳನ್ನು ಮಾಡುವೆನೆಂದು ಹೇಳಿದ್ದ ನೀನು ಮತ್ತೆ ನಿನ್ನ ಮುಖವನ್ನೇ ತೋರಿಸಲಿಲ್ಲವಲ್ಲಾ ! ಎಲ್ಲಿ ಹೋಗಿದ್ದೆ ?

**ಕಾಕೋದರ**—ನಿನ್ನ ಕಾರ್ಯದಲ್ಲಿಯೇ ಇದ್ದೆನು ನಿನ್ನ ಸೇವಕನು ಬರಲಿಲ್ಲವೇನು ?

**ರತ್ನಾಕರ**—ಹಾಗಾದರೆ ಏನೇನು ಪ್ರಯತ್ನಗಳನ್ನು ಮಾಡಿರುವೆ ? ಹೇಳು.

**ಲಿಂಗ**—(ಪ್ರವೇಶಿಸಿ) ಸ್ವಾಮಿ ! ಪತ್ರಗಳೆಲ್ಲವನ್ನೂ ಅಂಚೆಗೆ ಕೊಟ್ಟು ಬಂದೆನು

**ರತ್ನಾಕರ**—ಪತ್ರಗಳು ಯಾವುವೋ ?

**ಲಿಂಗ**—ಈ ನಿಮ್ಮ ಸ್ನೇಹಿತರು ಕೊಟ್ಟಿದ್ದವು

**ರತ್ನಾಕರ**—ಮಿತ್ರನೇ ! ಪತ್ರಗಳು ಯಾವುವು ?

**ಕಾಕೋದರ**—ಮಿತ್ರಾ ! ನಾನು ಸುಮ್ಮನಿದ್ದೆನೆಂದು ತಿಳಿಯಬೇಡ (ಸೇವಕನನ್ನು ನೋಡಿ) ಎಲವೋ ! ಲಿಂಗ ! ನೀನು ನಿನ್ನ ಕೆಲಸವನ್ನು ನೋಡು ಹೋಗು.

**ಲಿಂಗ**—ನಮ್ಮ ರಾಯರ ಅಪ್ಪಣೆಗಾಗಿ ಕಾದಿರುವುದೇ ನನ್ನ ಕೆಲಸ !

**ಕಾಕೋದರ**—ಮಿತ್ರಾ ! ಇವನನ್ನು ಹೊರಗೆ ಕಳುಹಿಸು, ವಿಷಯವನ್ನು ತಿಳಿಸುವೆನು

**ಲಿಂಗ**—ಸ್ವಾಮಿ ! ನಾನೇ ಹೋಗುವೆನು. (ಆತ್ಮ) ತಾವು ದೊಡ್ಡವರು ತಮ್ಮಂಥವರ ಆಲೋಚನೆಗಳಿಗೆ ನಮ್ಮಂಥವರು ಸೇರಲೇಬಾರದು.

(ಮರೆಯಾಗಿ ನಿಲ್ಲುವನು)

**ಕಾಕೋದರ**—ಮಿತ್ರಾ ! ಕೇಳು, ಆ ಕಬೀರನ ಪತ್ನಿಯು ಸಾಮಾನ್ಯ ಪ್ರಯತ್ನಗಳಿಂದ ನಮ್ಮ ವಶವಾಗುವಂತೆಯಿಲ್ಲವಾದಕಾರಣ ಆ ಕಬೀರನೇ ಆಕೆಯನ್ನು ತಂದು ನಿನಗೊಪ್ಪಿಸುವಂತೆ ಒಂದು ಚಮತ್ಕಾರವನ್ನು ಕಲ್ಪಿಸಿರುವೆನು.

**ಮಧುಮೋಹಿನಿ**—(ಮರೆಯಲ್ಲಿ) ಇವನು ಆ ಕಬೀರದಾಸನ ಪತ್ನಿಯನ್ನು ಬಯಸಿರಬೇಕು. ಓಹೋ ! ಈಗ ವಿಷಯವು ಸ್ಪಷ್ಟವಾದಂತಾಯಿತು.

ರತ್ನಾಕರ—ಏನು ? ಕಬೀರನೇ ಆಕೆಯನ್ನು ಒಪ್ಪಿಸುವಂತೆಯೇ? ನನ್ನನ್ನು ಹಾಸ್ಯ ಮಾಡುವೆಯೋ ?

ಕಾಕೋದರ— ಇಲ್ಲ. ನಿಜವಾಗಿಯೂ ಆರೀತಿ ಉಪಾಯಮಾಡಿರುವೆನು.

ರತ್ನಾಕರ—ಯಾವ ಉಪಾಯವನ್ನು ಮಾಡಿರುವೆ ? ದಯವಿಟ್ಟು ಬೇಗನೆ ಹೇಳು, ಕೇಳುವ.

ಕಾಕೋದರ—ಕೇಳು ! ಕಬೀರನು ಬಹಳ ಬಡವನು. ಅವನನ್ನು ಹೆಚ್ಚಾದ ಹಣದ ಬಾಧೆಗೆ ಸಿಕ್ಕಿಸಿದರೆ ನಮ್ಮಲ್ಲಿ ಹಣದ ಸಾಲಕ್ಕಾಗಿ ಬರುವನು. ಆಗ ವಿಕ್ರಯಿಸಲಾಗಲಿ, ಒತ್ತೆಯಿಡಲಾಗಲಿ, ಅವನಲ್ಲಿ ವಸ್ತು ವಾಹನ ಭೂಮಿ ಕಾಣಿಗಳೇನೂ ಇಲ್ಲ. ಇರುವುದೆಲ್ಲವೂ ಒಬ್ಬ ಹೆಂಡತಿ, ಮತ್ತು ಒಬ್ಬ ಮಗ. ಮಗನು ಹುಡುಗನಾದುದರಿಂದ ಅವನಿಗೆ ಹೆಚ್ಚು ಬೆಲೆಯನ್ನು ಕೊಡಲಾಗುವುದಿಲ್ಲ. ಆದರಿಂದ ನಿನ್ನಲ್ಲಿ ತನ್ನ ಹೆಂಡತಿಯನ್ನೇ ತಂದು ಒತ್ತೆಯಿಡುವಂತೆ ಉಪಾಯ ಮಾಡುತ್ತಿರುವೆನು.

ಮಧುಮೋಹಿನಿ—ಇಂತಹ ಮನೆ ಮುರುಕತನದಲ್ಲಿ ಇವನು ನಿಸ್ಸೀಮನು!

ರತ್ನಾಕರ— (ಆತುರದಿಂದ) ಆದೇನು ಉಪಾಯವನ್ನು ಮಾಡಿರುವೆ ? ಬೇಗನೆ ಹೇಳಬಾರದೇ ?

ಕಾಕೋದರ—ಕಬೀರನು ರಾಮ ನವರಾತ್ರಿಯ ಉತ್ಸವವನ್ನು ಮಾಡುವುದಾಗಿಯೂ ಅದಕ್ಕಾಗಿ ಎಲ್ಲರೂ ಬರಬೇಕೆಂತಲೂ ಭರತಖಂಡದ ಸಾಧುಗಳನೇಕರಿಗೆ ಆ ಕಬೀರನೇ ಬರೆದಂತೆ ಪತ್ರಗಳನ್ನು ಬರೆದು ಕಳುಹಿಸಿರುವೆನು. ಅವರೆಲ್ಲರೂ ಇವನ ಮನೆಗೆ ಬಂದು ಸೇರುವರು ಆಗ ಅವರನ್ನು ಸತ್ಕರಿಸಿ ಉತ್ಸವವನ್ನು ಮಾಡದಿದ್ದರೆ ವಿಧಿಯಿಲ್ಲದೆ ಬರುವುದು, ಕಬೀರನಿಗೆ ಹಣದ ಅವಶ್ಯಕತೆಯುಂಟಾಗುವುದು. ನೀನು ಅವನ ಮನೆಯ ಬಳಿಯಲ್ಲಿಯೇ ಅಂಗಡಿಯನ್ನಿಟ್ಟು ಅವನಲ್ಲಿ ಬಹಳ ಬಳಕೆಯಾಗಿರುವುದರಿಂದ ನಿನ್ನನ್ನೇ ಹಣವನ್ನು ಕೇಳುವನು. ಆಗ ಉಪಾಯದಿಂದ ಅವನು ಆಕೆಯನ್ನು ನಿನ್ನಲ್ಲಿ ವಿಕ್ರಯಿಸುವಂತೆ ಅಥವಾ ಒತ್ತೆಯಿಡುವಂತೆ ನಾನು ಸಂಧಾನಮಾಡುವೆನು.

ರತ್ನಾಕರ— ಬಹಳ ಸಂತೋಷ ! ಮಿತ್ರಾ ! ಕಾಕೋದರಾ ! ನಿನ್ನ ಬುದ್ಧಿಯು ಬಹಳ ಶ್ಲಾಘ್ಯವಾದುದು. ಆಹಾ ! ಎಂತಹ ಉಪಾಯವನ್ನು ಕಲ್ಪಿಸಿರುವೆ ! ಮಿತ್ರನೆಂದರೆ ನೀನೆ !

**ಮಧುಮೋಹಿನಿ**—(ಮರೆಯಲ್ಲಿ) ಆಹಾ! ಹಾ! ನಿಜ! ಮನೆ ಹಾಳುಮಾಡುವ ಮಿತ್ರ!!

**ಕಾಕೋದರ**—ಮಿತ್ರಾ! ನಿನ್ನಂತಹ ಸ್ನೇಹಿತನಿಗೆ ಉಪಕಾರ ಮಾಡುವುದೇ ನನ್ನ ಕರ್ತವ್ಯವೆಂದಾಲೋಚಿಸಿರುವೆನು. ಆದರೆ ಆ ಕಬೀರನು ಕೇಳುವುದಾದರೆ ನೀನು ಎರಡು ಮೂರು ಸಾವಿರ ವರಹಗಳನ್ನಾದರೂ ಕೊಡಲು ಹಿಂದೆಗೆಯಕೂಡದು.

**ರತ್ನಾಕರ**—ಮಿತ್ರಾ! ಏನು ಹೀಗೆ ಹೇಳುವೆ! ಆ ರಮಣಿಗಾಗಿ ನಾನು ಪ್ರಾಣವನ್ನೇ ಕೊಡಲು ಸಿದ್ಧನಾಗಿರುವೆನು.

**ಮಧುಮೋಹಿನಿ**—(ಮರೆಯಲ್ಲಿ) ಕಡೆಗೆ ಹಾಗೆಯೇ ಆದರೂ ಆಗಬಹುದು.

**ಕಾಕೋದರ**—ಮಿತ್ರಾ! ಇನ್ನು ನಾನು ಹೋಗುವೆನು. ನೀನು ಶಾಂತನಾಗು. (ಹೋಗುವನು)

**ರತ್ನಾಕರ**—(ಆತ್ಮಗತ) ಅವಳನ್ನು ನನ್ನ ವಶಪಡಿಸಲು ಕಾಕೋದರನು ಒಳ್ಳೆಯ ಪ್ರಯತ್ನವನ್ನು ಮಾಡಿರುವನು. ಆದರೆ ಆ ಹಾಳು ಮಧುಮೋಹಿನೀ ಪಿಶಾಚವು ಬೇರೆ ಆಗಾಗ ಬಂದು ನನ್ನನ್ನು ಪೀಡಿಸಿ ಅವಹೇಳನದ ಮಾತುಗಳನ್ನಾಡಿ ನನ್ನ ಮನಸ್ಸನ್ನು ಕಲಕುತ್ತಿರುವುದು. ಏನು ಮಾಡಲಿ?

**ಮಧುಮೋಹಿನಿ**—(ಆತ್ಮಗತ) ಇವನಿಗೆ ಆ ಕಬೀರದಾಸನ ಪತ್ನಿಯಲ್ಲಿ ಮನವು ನೆಟ್ಟಿರುವುದೂ ನನ್ನಲ್ಲಿ ಅಸಹ್ಯವುಂಟಾಗಿರುವುದೂ ಈಗ ಸ್ಪಷ್ಟವಾಯಿತು.

**ರತ್ನಾಕರ**—ಏನನ್ನಾದರೂ ಮಾಡಿ ಆ ಪಿಶಾಚ ಸ್ವರೂಪಳಾದ ಮಧುಮೋಹಿನಿಯನ್ನು ನಿವಾರಣೆಮಾಡಿಕೊಳ್ಳಲೇಬೇಕು. ಇದಕ್ಕೇನುಮಾಡಲಿ ಮತ್ತೆ ಯಾವಾಗ ಬಂದು ನನ್ನನ್ನು ಕಾಡಿಸುವಳೋ ಎಂಬ ಶಂಕೆಯು ನನ್ನನ್ನು ಬಾಧಿಸುತ್ತಲೇ ಇರುವುದು

**ಮಧುಮೋಹಿನಿ**—ಈ ದ್ರೋಹಿಯು ಈವರೆಗೂ ನನ್ನಾಗಮನವನ್ನು ಗಮನಿಸಲೇ ಇಲ್ಲ. ನನ್ನನ್ನು ವಿಧವಿಧವಾಗಿ ದೂಷಿಸುತ್ತಿರುವನು

ಈಗಲೇ ಹೋಗಿ ಚೆನ್ನಾಗಿ ಅಕ್ಷೇಪಿಸಿ ಅವನ ಚಿತ್ತವೃತ್ತಿಯನ್ನು ನನ್ನಂತೆ ತಿದ್ದಿಕೊಳ್ಳುವೆನು. (ಮುಂದಕ್ಕೆ ಬರುವಳು)

ರತ್ನಾಕರ—(ಬರುತ್ತಿರುವ ಮಧುಮೋಹಿನಿಯನ್ನು ನೋಡಿ ಆತ್ಮಗತ) ಇದೋ! ಇದೋ! ನಾನು ಊಹಿಸಿದಂತೆ ,ಮತ್ತೆ ಬಂದೇಬಿಟ್ಟಳು. ಈಗ ಏನು ಮಾಡಲಿ ?

ಮಧುಮೋಹಿನಿ—ಎಲೈ! ಧೂರ್ತನೇ! ಮಧುವನ್ನು ಸುರಿಸುವ ಸವಿನ್ನು ಡಿಗಳಿಂದ ನನ್ನನ್ನು ಆಗಾಗ ಸಮಾಧಾನಪಡಿಸುತ್ತ ನೀನು ವಿಷ ಮಯ ಹೃದಯನಾಗಿ ದುರಾಲೋಚನೆಯನ್ನು ಮಾಡುತ್ತಿರುವುದು ಉಚಿತವೇ ?

ರತ್ನಾಕರ—ಎಲೌ! ಮಧುಮೋಹಿನೀ! ನಾಲಗೆಯಲ್ಲಿ ಮಧುವನ್ನೂ ಹೃದ ಯದಲ್ಲಿ ವಿಷವನ್ನೂ ಧರಿಸಿರುವವರು ನಾರಿಯರೆಂದು ಲೋಕಪ್ರಸಿದ್ಧ ವಾಗಿದೆ. ಹೀಗಿರುವಲ್ಲಿ ನೀನು ನನ್ನನ್ನೇತಕ್ಕೆ ದೂರುವೆ ?

ಮಧುಮೋಹಿನಿ—ಆಹಾ! ಸ್ತ್ರೀಯರು ಆ ರೀತಿಯಿರತಕ್ಕವರೆಂದು ಹೇಳಿರ ತಕ್ಕವರೂ ಪುರುಷರೇ ಅಲ್ಲವೇ ? ತಾವು ಮಾಡುವ ಮೋಸಗಳಿಂದ ಕುಪಿತರಾದ ಸ್ತ್ರೀಯರು ಮನಸ್ಸು ಕೆಟ್ಟು ವ್ಯಥೆಯಿಂದಿರುವಾಗ ತಮ್ಮ ಇಷ್ಟಕ್ಕೆ ಅನುಮೋದಿಸದಿದ್ದರೆ ಸ್ತ್ರೀಯರು ಅಯೋಗ್ಯರೆಂದು ದೂರು ವುದೇ ನಿಮ್ಮಂತಹ ಪುರುಷರ ಸ್ವಭಾವವು.

ರತ್ನಾಕರ—ನಿಜ ಪುರುಷರು ಕೆಟ್ಟವರು. ಅದರಿಂದ ಅಂತಹ ನಮ್ಮ ಸಹವಾಸವೇ ನಿನಗೆ ಬೇಡ. ಹೋಗು. ಹೊರಟುಹೋಗು.

ಮಧುಮೋಹಿನಿ—ಸಾಕು, ಸಾಕು ಈ ಉಪಾಯದ ಮಾತುಗಳಿಂದ ನನ್ನನ್ನು ತೊಲಗಿಸಬೇಕೆಂಬುದೇ ನಿನ್ನ ಉದ್ದೇಶವಾಗಿರುವಲ್ಲಿ, ನನ್ನ ಮಾತುಗಳೆಲ್ಲವೂ ಅರಣ್ಯ ರೋದನವೇ ಸರಿ!

ರತ್ನಾಕರ—ಅರಣ್ಯದಲ್ಲಿ ಅಲ್ಲದಿದ್ದರೆ ಗೃಹದಲ್ಲಿಯೇ ರೋದಿಸು, ಹೋಗು. ನನ್ನ ಮನಸ್ಸು ಬಹಳ ವ್ಯಥೆಗೆ ಸಿಕ್ಕಿರುವುದು. ಈಗ ನನ್ನನ್ನು ಬಾಧಿಸಬೇಡ.

**ಮಧುಮೋಹಿನಿ**—ಪರರನ್ನು ವ್ಯಥೆಪಡಿಸಿದವರಿಗೆ ವ್ಯಥೆಯುಂಟಾಗುವುದು ಸ್ವಭಾವವೇ ಅಲ್ಲವೇ ? ಅಲ್ಲದೆ, ಮಾಡಬಾರದ ಕಾರ್ಯಗಳನ್ನು ಮಾಡಿದರೂ, ಮಹಾನುಭಾವರಂತೆ ನಟನೆ ಮಾಡುತ್ತ ಸುಳ್ಳನ್ನು ನಿಜಕ್ಕಿಂತಲೂ ಹೆಚ್ಚಾಗಿ ಕಾಣುವಂತೆ ನಿತ್ಯಕರ್ತವ್ಯವನ್ನಾಗಿ ಹೇಳುತ್ತ ಮೋಸವನ್ನೇ ಉದ್ಯೋಗವನ್ನಾಗಿ ಕೈಕೊಂಡು ದ್ರೋಹಚಿಂತನವನ್ನೇ ನಿತ್ಯ ತಪಸ್ಸನ್ನಾಗಿ ಉಳ್ಳ ನಿಮ್ಮಂತಹ ಮಹಾಪುರುಷರು ಲೋಕದಲ್ಲಿ ಯಾರನ್ನು ತಾನೇ ಬಾಧಿಸುವುದಿಲ್ಲ. ಅಯ್ಯೋ ! ನಿರಪರಾಧಿನಿಯಾಗಿ, ನಂಬಿದ ಪುರುಷನಿಗೋಸ್ಕರ ಕರವಿಡಿದ ಪತಿಯನ್ನೂ ಸಹ ತೊರೆದು ಸರ್ವಸ್ವವೂ ನೀವೇ ಯೆಂದು ನಂಬಿದ್ದ ಅಬಲೆಯನ್ನು ನಡುನೀರಿನಲ್ಲಿ ಕೈ ಬಿಟ್ಟು ಅನ್ಯಮಾರ್ಗವನ್ನು ಅನುವರ್ತಿಸುವ ನಿಮ್ಮಂತಹ ಪುರುಷರಿಂದಲೇ ಲೋಕವು ಈ ಸ್ಥಿತಿಗೆ ಬಂದಿರುವುದು.

**ರತ್ನಾಕರ**—ಎಲೇ ! ನಾಚಿಕೆಕೆಟ್ಟ ಹೆಂಗಸೇ ! ಸಾಕು ; ಏತಕ್ಕೆ ಮನಸ್ಸು ಬಂದಂತೆ ಬಗುಳುವೆ ! ಪತಿಯನ್ನು ತೊರೆದೆನೆಂದು ನೀನೇ ಒಪ್ಪಿಕೊಳ್ಳುತ್ತಿರುವೆ, ಈ ನಿನ್ನಂತಹ ಪತಿವ್ರತೆಯರಿಂದಲೇ ಲೋಕವು ಈ ಸ್ಥಿತಿಗೆ ಬಂತೆಂದು ನಾನು ತಿಳಿದಿರುವೆನು. ಅಲ್ಲದೆ ನಿನ್ನನ್ನು ನಾನು ಸಂಗ್ರಹಿಸಿದುದಕ್ಕೆ ತಕ್ಕಷ್ಟು ಫಲವು ನಿನಗೆ ನನ್ನಿಂದ ದೊರೆತೇ ಇರುವುದು. ಇನ್ನು ನಿನ್ನ ಸ್ನೇಹವು ಸಾಕು.

**ಮಧುಮೋಹಿನಿ**—ನಿಜ ! ನಿಜ ! ಈ ಫಲವೇ ದೊರೆತಿರುವುದು ! ಅಮೃತ ಫಲವನ್ನು ತೋರಿಸಿ ಕೈಗೆ ಸಿಕ್ಕಿದಾಗ ಮೋಸದಿಂದ ವಿಷವನ್ನೆರೆದಂತೆ ಮಾಡಿರುವ ನಿನ್ನ ಈ ಮೋಸಕ್ಕಿಂತಲೂ ಇನ್ನು ನೀನು ಕೊಡಬಲ್ಲ ಉತ್ತಮ ಫಲವಾವುದು ! ಛೀ ! ಛೀ ! ನಾಚಿಕೆಯಿಲ್ಲದೆ ಏತಕ್ಕೆ ಮಾತನಾಡುವೆ ?

**ರತ್ನಾಕರ**—(ಆತ್ಮಗತ) ಇವಳ ಹರಟೆಯು ಬಲವಾಯಿತು, ಆ ಮನೋಹರೆಗಾಗಿ ಚಿಂತಿಸುತ್ತಿರುವ ನಾನು ಇವಳೊಡನೆ ಮಾತನಾಡುವುದು, ಕಲ್ಲು ಸಕ್ಕರೆಯನ್ನು ಒಯುಸಿ ಕಲ್ಲನ್ನು ಕಡಿದು ಹಲ್ಲನ್ನು ಮುರಿದುಕೊಂಡಂತಾಗುವುದು. ಅವಳು ನನ್ನ ಮನೋಹಾರಿಣಿ, ಇವಳು ಪ್ರಾಣಹಾರಿಣಿ, ಅವಳು ನಾರಿ ಇವಳು ಮಾರಿ. ಆದರಿಂದ ಏನನ್ನಾದರೂ ಹೇಳಿಕೊಳ್ಳಲಿ, ಇವಳ ಸಹವಾಸವು ತಪ್ಪಿದರೆ ಸಾಕು.

(ಪ್ರಕಾಶಂ) ಎಲೌ ಮಧುಮೋಹಿನೀ! ನಿನ್ನ ಈ ದೂಷಣೆಯನ್ನು ನಾನು ಕೇಳಲಾರೆನು ನನಗೆ ಬಹಳವಾದ ಕಾರ್ಯವಿರುವುದು. ನಾನು ಹೋಗುವೆನು. ನೀನು ಇಲ್ಲಿಂದ ಹೊರಟುಹೋಗು (ಹೋಗುವನು.)

ಮಧುಮೋಹಿನಿ— ಈ ಧೂರ್ತನು ಮೋಸಮಾಡಿ ಹೋದನು ಸರಸವೆಲ್ಲವೂ ವಿರಸವಾಯಿತು ಪತಿಯನ್ನು ಬಿಟ್ಟು ಇವನನ್ನು ನಂಬಿದ ನನ್ನ ಗತಿಯು ಗುಂಪನ್ನು ಬಿಟ್ಟು ಚದರಿದ ಕಪಿಯಂತಾಯಿತು. ಅದರಿಂದ ಹೇಗಾದರೂ ಮಾಡಿ ಸಮಯವನ್ನು ನಿರೀಕ್ಷಿಸಿ ಇವನ ಚಿತ್ತವನ್ನು ನನ್ನ ಕಡೆಗೆ ತಿರುಗಿಸಿಕೊಳ್ಳಬೇಕು. ಅದು ಸಾಧ್ಯವಾಗದಿದ್ದರೆ ಇವನ ಅಯೋಗ್ಯತನವನ್ನು ಜನರಲ್ಲಿ ಬಿತ್ತಿ ಮಾನವನ್ನು ಕಳೆಯುವೆನು. (ಹೋಗುವಳು.)

## ದೃಶ್ಯ ೧೨ (ಗಂಗಾತೀರದಲ್ಲಿ ಕಮಾಲನ ಮುಂಡವನ್ನು ಮರಕ್ಕೆ ತೂಗಹಾಕಿರುವ ಪ್ರಾಂತದಲ್ಲಿ ರತ್ನಾಕರನ ಪ್ರವೇಶ.)

ರತ್ನಾಕರ—

ಕಂ|| ಆ ಮದಿರಾಕ್ಷಿಯ ವಿರಹದಿ |
ನೀ ಮಧುಮೋಹಿನಿಯ ವಿರಸದಿಂ ಬಳಲುತ್ತುಂ ||
ಕಾಮಾಸ್ತ್ರ ಹತಿಗೆ ಸಿಲ್ಕಿ |
ಓರ್ಮನವಮನದೆಂತು ಸಂತವಿಸಿದಪೆ ನಮವಾ ! ||೨೬||

ಆ ಮನೋಹರೆಯ ವಿರಹದಿಂದಲೂ ಮಧುಮೋಹಿನಿಯ ವಿರಸದಿಂದಲೂ ಬೇಸತ್ತಿರುವ ನನ್ನ ಚಿತ್ತಕ್ಕೆ ಯಾವ ವಿನೋದವೂ ಬೇಕಿಲ್ಲವಾಗಿರುವುದು. ಆ ಕಬೀರನ ಪತ್ನಿಯು ಈ ಗಂಗಾ ಸ್ನಾನಘಟ್ಟಕ್ಕೆ ಬಂದಿರಬಹುದು, ಅವಳ ಮುಖಕಮಲವನ್ನಾದರೂ ನೋಡಿ ನನ್ನ ಚಿಂತೆಯನ್ನು ಸ್ವಲ್ಪ ಶಮನಮಾಡಿಕೊಳ್ಳಬಹುದೆಂದು ಅವಳ ನಿರೀಕ್ಷಣೆಯಿಂದ ಇಲ್ಲಿಗೆ ಬಂದೆನು ಆಕೆ ಇನ್ನೂ ಬಂದಂತೆ ಇಲ್ಲ.

ಮಧುಮೋಹಿನಿ—(ಪ್ರವೇಶಿಸಿ, ಆತ್ಮಗತ) ಇದೋ! ರತ್ನಾಕರನು ಇಲ್ಲಿಯೇ ಇರುವನು. ಇಲ್ಲಿ ವಿಜನವಾಗಿರುವುದು. ಈಗ ಈತನನ್ನು ಬಲಾತ್ಕರಿಸಿ

ನನ್ನ ಮಾರ್ಗಕ್ಕೆಳೆಯುವೆನು. (ಮುಂದಕ್ಕೆ ಬಂದು) ಪ್ರಿಯಾ! ನನ್ನಲ್ಲಿನ ಕೋಪವನ್ನು ಬಿಡು ನನ್ನನ್ನು ನೀನು ಉದಾಸೀನಮಾಡಲು ನನ್ನ ಅಪರಾಧವೇನು ? ದಯವಿಟ್ಟು ತಿಳಿಸು ಬಾ !

**ರತ್ನಾಕರ**—(ಬೆಚ್ಚುಬಿದ್ದು ಆಶ್ಚರ್ಯದಿಂದ ಆತ್ಮ) ಇದೇನು ? ಈ ಪಿಶಾಚವು ನನ್ನನ್ನು ಇಲ್ಲಿಗೂ ಹಿಂಬಾಲಿಸಿ ಬಂತೇ ? (ಸುಮ್ಮನೆ ನಿಲ್ಲುವನು)

**ಮಧುಮೋಹಿನಿ**—ಪ್ರಿಯಾ ! ಏತಕ್ಕೆ ಅನ್ಯಾಯವಾಗಿ ನನ್ನನ್ನು ವ್ಯಥೆಪಡಿಸುವೆ ? ನನ್ನನ್ನು ನೀನೇ ಒಲಿದು ವಶಪಡಿಸಿಕೊಂಡು ಈಗ ಈರೀತಿ ನಿರಾಕರಿಸುವುದು ಉಚಿತವೇ ?

**ರತ್ನಾಕರ**—ಎಲೌ ! ನಾನು ನಿನ್ನನ್ನು ಒಲಿದರೂ ನೀನು ನನ್ನನ್ನು ಒಲಿಯದಿದ್ದಲ್ಲಿ ನನ್ನಲ್ಲಿ ಬಂದು ಸೇರುತ್ತಿದ್ದೆಯಾ ?

**ಮಧುಮೋಹಿನಿ**—ನಿಜ ! ಅಬಲೆಯೂ, ಅವಿವೇಕಿನಿಯೂ ಆದ ನಾನು, ನೀನು ಈರೀತಿಯಾಗಿ ನನ್ನನ್ನು ಕೈಬಿಡುವೆಯೆಂದು ತಿಳಿಯದೆ ಧೂರ್ತನಾದ ನಿನ್ನ ಮತ್ತು ನಿನ್ನ ಮಿತ್ರನಾದ ಆ ನೀಚ ಕಾಕೋದರನ ಬೇಳುವೆಯ ಮಾತುಗಳಿಗೆ ಬೆರಗಾಗಿ ನಿನ್ನ ಬಲೆಗೆ ಬಿದ್ದೆನು. ಆಗ ನನಗಾಗಿ ನೀನು ತೋರಿಸಿದ ಪ್ರೀತಿಯು ಈಗ ಹೇಗೆ ಮಾಯವಾಯಿತು ? ಏತಕ್ಕೆ ಮಾಯವಾಯಿತು ?

**ರತ್ನಾಕರ**—ಎಲೌ ! ಮಧುಮೋಹಿನೀ ! ಏತಕ್ಕಾಗಿ ನಮ್ಮ ಸ್ನೇಹವು ಪ್ರಾರಂಭವಾಗಿತ್ತೋ ಆ ಫಲವು ನಮ್ಮಿಬ್ಬರಿಂದಲೂ ಅನುಭವಿಸಲ್ಪಟ್ಟಿತು. ಅದರಿಂದ ಈಗ ಆ ಸ್ನೇಹವೂ ಪ್ರೀತಿಯೂ ಮಾಯವಾದುವು. ಇನ್ನು ನಾನು ಧೂರ್ತನೆಂದು ನಿನಗೆ ತಿಳಿಯಿತಷ್ಟೇ! ಅದರಿಂದಲಾದರೂ ನೀನು ನನ್ನ ಸ್ನೇಹವನ್ನು ಬಿಟ್ಟು ನಡೆ ಇಲ್ಲ ನಿಲ್ಲಬೇಡ. ನನ್ನ ಹಿಂದೆ ಬರಬೇಡ; ಹೋಗು, ಹೊರಟುಹೋಗು. ನೀನು ಮತ್ತೆ ಬರುವುದಾದರೆ ನಿನಗೆ ತಕ್ಕ ಶಿಕ್ಷೆಯನ್ನು ಮಾಡುವೆನು.

**ಮಧುಮೋಹಿನಿ**—(ಕೋಪದಿಂದ) ಎಲೈ ! ವಿಶ್ವಾಸಘಾತಕನೇ ! ವಂಚಕನೇ ! ಗೋಮುಖವ್ಯಾಘ್ರನೇ ! ಎಂತಹ ಮೋಸವನ್ನು ಮಾಡಿದೆ ? ನೀನು ಈ ರೀತಿ ದ್ರೋಹಮಾಡುವ ಘೋರಪಾತಕಿಯೆಂದು ನಾನು ಸ್ವಪ್ನದಲ್ಲಿಯೂ ತಿಳಿದಿರಲಿಲ್ಲವಲ್ಲಾ !

**ರತ್ನಾ**ಕರ—ಎಲೆ ! ಹುಚ್ಚಳೇ! ಬಾಯಿಗೆ ಬಂದಂತೆ ಭಯವಿಲ್ಲದೆ ಹರಟು ವೆಯಾ ?

**ಮಧುಮೋಹಿನಿ**—ಇನ್ನು ನನಗೆ ಭಯವೇತಕ್ಕೆ ? ನಿನ್ನಲ್ಲಿ ನನಗಿದ್ದ ಆ ನಯಭಯಗಳನ್ನು ನಿನ್ನ ದುರ್ಮಾರ್ಗವರ್ತನದಿಂದ ನೀನೇ ಕಳೆದೆ ಯಲ್ಲವೇ ?

**ರತ್ನಾ**ಕರ—ಎಲೆ ! ಭ್ರಷ್ಟೆ ! ಮುಚ್ಚು ಬಾಯನ್ನು

**ಮಧುಮೋಹಿನಿ**—ಭ್ರಷ್ಟೆಯೆನ್ನುವೆಯಾ ? ಅಯೋಗ್ಯಾ ! ಅಯೋಗ್ಯ ನಾದ ನೀನಲ್ಲವೇ ನನ್ನನ್ನು ಭ್ರಷ್ಟೆಯನ್ನಾಗಿ ಮಾಡಿದ ಪರಮಪಾ ಪಿಯು !! ನಾನು, ಕೈಹಿಡಿದ ಪತಿಯನ್ನೂ ಬಂಧುಬಳಗಗಳನ್ನೂ ಅಗಲಿ ನಿನ್ನಲ್ಲಿ ತೋರಿಸಿದ ಪ್ರೀತಿಯೂ ನೀನು ನನ್ನಲ್ಲಿಟ್ಟಿದ್ದ ವಿಶ್ವಾ ಸವೂ ಈಗ ಏನಾದವು ?

**ರತ್ನಾ**ಕರ—ಹಾಳಾದವು. ಆ ಕಥೆಯನ್ನು ಬಿಡು.

**ಮಧುಮೋಹಿನಿ**—ಏನು ? ಹಾಳಾದುವೇ ? ಹಾಳಾದುವೆ ? ನೀನು ಹಾಳಾ ದರೆ ಅವೂ ಹಾಳಾಗಬೇಕಲ್ಲದೆ ಈಗಲೇ ಅವು ಹಾಳಾಗಬಹುದೇ ?

**ರತ್ನಾ**ಕರ—ನಿನ್ನ ಭಾಗಕ್ಕೆ ನಾನೂ ಹಾಳಾದೆನೆಂದೇ ತಿಳಿದುಕೋ.

**ಮಧುಮೋಹಿನಿ**—ಛೀ ! ಛೀ ! ಆಪ್ತತೆಗೂ, ಪ್ರೀತಿಗೂ, ನಂಬಿಕೆಗೂ ಅರ್ಹನಲ್ಲದ ಪರಮದ್ರೋಹಿಯೂ ವಂಚಕನೂ ಆದ ನೀನು ನಿನ್ನ ಯೋಗ್ಯತೆಗೆ ತಕ್ಕಂತೆ ಮಾತನಾಡುವೆ; ಚಿಂತೆಯಿಲ್ಲ. ನಿನ್ನನ್ನು ಪ್ರಾರ್ಥಿಸಿಕೊಂಡೆನು, ನಿನ್ನಲ್ಲಿ ಚರ್ಚಿಸಿದೆನು, ನಿನಗೆ ರೋಷವನ್ನು ಹುಟ್ಟಿಸಿದೆನು ; ಇಷ್ಟಾದರೂ, ನಂಬಿ ಬಂದ ಅಬಲೆಯಾದ ನನ್ನನ್ನು ನಡುನೀರಿನಲ್ಲಿ ಕೈಬಿಟ್ಟ ನಿನ್ನಂತಹ ಧೂರ್ತನೂ, ಕಿರಾತಕನೂ ವಂಚಕನೂ ಈ ದಿನಕ್ಕೆ ನನ್ನ ಭಾಗಕ್ಕೆ ಹಾಳಾದಂತೆಯೇ ಸರಿ ! ಇನ್ನು ನಿನ್ನ ಮನಸ್ಸು ಕರಗತಕ್ಕುದಲ್ಲವೆಂಬುದು ಸ್ಪಷ್ಟವಾಯಿತು, ಇನ್ನು ನಾನು ಮಾಡತಕ್ಕ ಕಾರ್ಯವನ್ನು ಮಾಡಿಯೇ ಬಿಡುವೆನು.

**ರತ್ನಾ**ಕರ—ಎಲೆ ! ರಂಡೇ ! ಏನು ಬಹಳ ಮೀರಿ ಹರಟುವೆ ? ನೀನು ಮಾಡತಕ್ಕ ಕಾರ್ಯವೇನು ? ನಿನ್ನ ಕೈಯಿಂದಾಗುವುದೇನು ? ಅದರಿಂದ ನನಗಾಗುವ ನಷ್ಟವೇನು ? ನೀಚಳೇ ?

ಮಧುಮೋಹಿನಿ—ನನ್ನಿಂದೇನಾಗುವುದೋ? ಏನಾಗುವುದೋ? ನೋಡು ತ್ತಿರು; ಈ ನಿನ್ನ ದುರ್ವರ್ತನೆಯನ್ನೂ ಅಯೋಗ್ಯತನವನ್ನೂ ನೀನು ಈಗ ಆ ಕಬೀರದಾಸನ ಪತ್ನಿಯನ್ನು ಅಪಹರಿಸಲು ಮಾಡಿರುವ ತಂತ್ರಗಳನ್ನೂ, ಆ ಚಂಡಾಲನಾದ ಕಾಕೋದರನು ಬರೆದಿರುವ ಪತ್ರ ಗಳ ವಿಚಾರವನ್ನೂ ಎಲ್ಲವನ್ನೂ ಎಲ್ಲರಲ್ಲಿಯೂ ಪ್ರಸಿದ್ಧಿಪಡಿಸಿ ನಿನ್ನ ಮಾನವನ್ನು ಕಳೆದು, ನೀನು ಊರಿನಲ್ಲಿ ಯಾರಿಗೂ ಮೋರೆಯನ್ನು ತೋರಿಸದಂತೆ ಮಾಡಿ ನಿನ್ನಂತಹ ಚಂಡಾಲನಿಲ್ಲವೆಂಬುದನ್ನು ವ್ಯಕ್ತ ಪಡಿಸಿ ಬಿಡುವೆನು. ಅಲ್ಲದೆ ನೀನು ನನ್ನನ್ನೀ ವಿರಹಸಂಕಟಕ್ಕೆ ಸಿಕ್ಕಿಸಿ ಅವಳನ್ನು ಹೇಗೆ ಸೇರುವೆಯೋ ನಾನು ನೋಡುವೆನು. ಈ ದುಃಖದಿಂದ ನಾನು ಮೃತಳಾದರೂ ನಿಮ್ಮಿಬ್ಬರನ್ನೂ ಪಿಶಾಚಿಯಾಗಿ ಯಾದರೂ ಅಗಲಿಸದಿರುವೆನೇ? ನೋಡುತ್ತಿರು! ನೋಡುತ್ತಿರು!!

ರತ್ನಾಕರ—(ಆತ್ಮಗತ) ಓಹೋ! ಇವಳು ಈ ವಿಚಾರಗಳೆಲ್ಲವನ್ನೂ ಹೇಗೆ ಭೇದಿಸಿ ತಿಳಿದುಕೊಂಡಳೋ ಕಾಣೆನಲ್ಲಾ! (ಚಿಂತಿಸಿ) ಇವಳು ಅಯೋ ಗ್ಯಳು! ಇನ್ನು ಇವಳನ್ನು ಬಿಡುವುದಾದರೆ ಇವಳು ಹೇಳಿಂತೆ ಮಾಡಿ ಬಿಡುವಳು. ಅದರಿಂದ ಇವಳನ್ನು ಉಪಾಯದಿಂದ ಈ ಗಂಗೆಯಲ್ಲಿ ನೂಕಿ ನಿಶ್ಚಿಂತನಾಗುವೆನು. (ಬಂದು ಮಧುಮೋಹಿನಿಯ ಕೈಹಿಡಿದು) ಪ್ರಿಯೇ! ನನ್ನನ್ನು ಮನ್ನಿಸು! ದಯೆಯಿಟ್ಟು ಮನ್ನಿಸು.

ಮಧುಮೋಹಿನಿ—(ಕೋಪದಿಂದ ತಿರಸ್ಕರಿಸುವಳು)

ರತ್ನಾಕರ—ಪ್ರಿಯೇ! ಏನೋ ಮನಸ್ಸಿನ ಚಪಲತೆಯಿಂದ ನಿನ್ನನ್ನು ದೂರಿದೆನು; ನನ್ನನ್ನು ಮನ್ನಿಸು ಬಾ.

ಕಂ|| ವಿಪರೀತವಿದೇಂ ಮೋಹನೆ |
ವಿಪುಲಗುಣಾಭರಣೆ ಪರಮ ವಿಭವಾದರಣೇ ||
ಕೃಪೆಯಿಂ ಮನ್ನಿಸುತೆನ್ನಂ |
ಚಪಲತೆಯಂ ಬಿಡುತೆ ಮೋದ ಮೊಂದಿಸು ಲಲನೇ! ||೨೭||

**ಮಧುಮೋಹಿನಿ**—(ಪ್ರಣಯ ಕೋಪದಿಂದ) ಪಾಪ! ಪಾಪ!! ಏತಕ್ಕೆ! ಏನೂ ಬೇಡ! ನಾನು ಅಯೋಗ್ಯಳು! ಭ್ರಷ್ಟಳು! ತಮಗೇತಕ್ಕೆ ಇಂಥವಳ ಸಹವಾಸ! (ತಿರಸ್ಕರಿಸಿ ನೂಕುವಳು.)

**ರತ್ನಾಕರ**—(ಕೈ ಮುಗಿದು) ಪ್ರಿಯೇ! ಕೋಪಿಸಬೇಡ, ನನ್ನ ಅಪರಾಧವನ್ನು ಕ್ಷಮಿಸು. ನಾನು ತಿಳಿಯದೆ ಆ ರೀತಿ ನಿನ್ನನ್ನು ದೂರಿದೆನು. ನಾನು ನಿಜವಾಗಿಯೂ ನಿನ್ನನ್ನು ಕೈ ಬಿಡುವುದಿಲ್ಲ! ನನ್ನ ಮಾತನ್ನು ನಂಬು. ನನ್ನೊಡನೆ ಬಾ.

**ಮಧುಮೋಹಿನಿ**—ನಿನಗೆ ಕೋಪವನ್ನು ಹುಟ್ಟಿಸಿದುದರಿಂದಲಾದರೂ ಈ ರೀತಿ ನನ್ನನ್ನಾದರಿಸಿದೆಯಲ್ಲಾ! ಅಷ್ಟೇ ಸಾಕು!

**ರತ್ನಾಕರ**—ಪ್ರಿಯೇ! ನನಗೆ ಕೋಪವಿಲ್ಲ. ನನ್ನನ್ನು ಮನ್ನಿಸು ಬಾ! ಈ ಕೋಪವನ್ನು ಬಿಡು ಈ ನದೀತೀರದಲ್ಲಿ ಆನಂದಪಡೋಣ! ಬಾ! (ಕೈ ಹಿಡಿದೆಳೆದುಕೊಂಡು ಹೋಗುವನು)

**ಮಧುಮೋಹಿನಿ**—(ಪ್ರಣಯ ಕೋಪದಿಂದ) ಪಿಶಾಚದಂತಿರುವ ನನ್ನಲ್ಲಿ ಪಾಪ! ತಮಗಾನಂದವೇ! ಏನೂ ಬೇಡ!

**ರತ್ನಾಕರ**—(ನಗುತ್ತ, ಇನ್ನೂ ಹಂಗಿಸುವೆಯಲ್ಲಾ! ಆ ಮಾತನ್ನಲ್ಲಿಗೆ ಬಿಡು. ಬಾ! ಜಲಪಾನಮಾಡಿ ಇಲ್ಲ ವಿನೋದಪಡೋಣ.

**ಮಧುಮೋಹಿನಿ**—(ಮುಗುಳ್ನಗೆಯಿಂದ ರತ್ನಾಕರನ ಮುಖವನ್ನು ನೋಡುತ್ತ), ಆಗಲಿ, ಈಗಲಾದರೂ ನನ್ನಲ್ಲಿ ನಿನಗೆ ದಯೆಯುಂಟಾಯಿತಲ್ಲವೇ? ಅಷ್ಟೇಸಾಕು! (ಇಬ್ಬರೂ ನದೀತೀರಕ್ಕೆ ಹೋಗುವರು.)

**ರತ್ನಾಕರ**—ಭ್ರಷ್ಟಳೇ! ಹಾಳಾಗಿ ಹೋಗು. (ನದಿಯಲ್ಲಿ ನೂಕಿಬಿಡುವನು.)

**ಮಧುಮೋಹಿನಿ**—ಹಾ! ಭ್ರಷ್ಟಾ! ನಾನು ಪಿಶಾಚಿಯಾಗಿಯಾದರೂ ನನ್ನ ಕೋಪವನ್ನು ತೀರಿಸಿಕೊಳ್ಳದಿರುವೆನೇ!

**ರತ್ನಾಕರ**—ಅಯ್ಯೋ! ನಿಜ! ಇವಳು ಪಿಶಾಚವಾಗಿ ನನ್ನನ್ನು ಹಿಡಿದುಬಿಡುವಳೋ ಏನೋ! ಮುಂದೇನುಗತಿ! ಹೇಗಾದರೂ ಸದ್ಯಕ್ಕೆ ಅನಿಷ್ಟನಿವಾರಣೆಯಾಯಿತು ಇನ್ನು ನಿಶ್ಚಿಂತನಾಗಿ ಆ ರಮಣಿಯನ್ನು ಸೇರಲು ಪ್ರಯತ್ನಿಸುವೆನು. (ಹೋಗುವನು)

(ಕಬೀರನೂ ಬೀಬಿಯೂ ಸಾಧುಗಳನ್ನು ಸಾಗಕಳುಹಿಸಲು ಬರುವರು.)

**ಕಬೀರ**—ಪೂಜ್ಯಳಾದ ಗಂಗಾತರಂಗಿಣಿಯೇ ! ನಿನಗಭಿನಮಿಸುವೆನು. (ಸಾಧುಗಳನ್ನು ನೋಡಿ) ಪೂಜ್ಯರೇ ! ತಾವು ಅನುಗ್ರಹಿಸಿ ನಮ್ಮ ಪ್ರಾರ್ಥನೆಯಂತೆ ಈ ದಿನದ ಪಾರಣೆಯನ್ನು ತೀರಿಸಿಕೊಂಡು ಪ್ರಯಾಣಮಾಡಿದುದಕ್ಕಾಗಿ ನಾನು ಕೃತಜ್ಞನಾಗಿರುವೆನು ಈ ದಾಸನಲ್ಲಿ ದಯವಿರಬೇಕು.

**ಸಾಧುಗಳು**—ಮಹನೀಯರಾದ ಕಬೀರದಾಸರೇ ! ನೀವು ಪುಣ್ಯಶಾಲಿಗಳು, ನಿಮ್ಮನ್ನು ಶ್ರೀರಾಮಚಂದ್ರನು ಅನುಗ್ರಹಿಸಿ ಕಾಪಾಡುವನು. ಇನ್ನು ನಾವು ಹೋಗಿ ಬರುವೆವು. (ಕೈಮುಗಿಯುವರು.)

**ಕಬೀರ**—ಸಂತೋಷ (ಕೈಮುಗಿಯುವನು )

**ಬೀಬಿ**—(ಕಮಾಲನ ಮುಂಡವನ್ನು ನೋಡಿ ದುಃಖಿಸುವಳು )

**ಸಾಧುಗಳು**—(ನೋಡಿ) ಏನಿದು! ಆಶ್ಚರ್ಯವು ! ಈ ಮುಂಡವು ಯಾವುದು ? ಇದನ್ನು ನೋಡಿ ಈಕೆ ದುಃಖಿಸಲು ಕಾರಣವೇನು ?

**ಕಬೀರ**—(ತಲೆಯನ್ನು ತಗ್ಗಿಸಿ ಸುಮ್ಮನಿರುವನು.)

**ಸಾಧುಗಳು**—ಎಲೈ ! ಮಹನೀಯರೇ ! ಏತಕ್ಕೆ ಹೀಗೆ ತಲೆವಾಗಿ ವ್ಯಸನಪಡುವಂತೆ ಕಾಣುವಿರಿ ? ಈ ಮುಂಡವು ಯಾರದು ? ಇದನ್ನು ನೋಡಿ ವ್ಯಥೆಪಡಲು ಕಾರಣವೇನು ? ದಯವಿಟ್ಟು ಹೇಳಿ.

**ಕಬೀರ**—ಸ್ವಾಮಿ ! ಮಹಾತ್ಮರೇ ! ಆ ವಿಷಯವನ್ನೇನೆಂದು ಹೇಳಲಿ ! ಅದು ನನ್ನ ಕುಮಾರನಾದ ಕಮಾಲ್‌ದಾಸನ ಮುಂಡವು. ಆತನು ಶ್ರೀರಾಮ ಭಕ್ತನು. (ತಲೆ ತಗ್ಗಿಸುವನು )

**ಸಾಧುಗಳು**—ಏನು, ಏನು ! (ಆಶ್ಚರ್ಯದಿಂದ) ಇದು ನಿಮ್ಮ ಪುತ್ರನ ಮುಂಡವೇ ? ಆಹಾ ! ಹೀಗೆ ತೂಗಹಾಕಲ್ಪಡಲು ಕಾರಣವೇನು ?

ಕಬೀರ—ಪೂಜ್ಯರೇ ! ಸರ್ವಜ್ಞರಾದ ತಮಗೆ ಇದರ ಕಾರಣವು ಗೋಚರವೇ ಇರಬೇಕಲ್ಲವೇ ? ಅತಿಥಿ ಸತ್ಕಾರಕ್ಕಾಗಿ ಅವನ ತಲೆಯು ಛೇದಿಸಲ್ಪಟ್ಟಿತು.

ಸಾಧುಗಳು—ಮಹನೀಯರೇ ! ಇದು ಅತಿವಿಚಿತ್ರ ವಿಷಯವಾಗಿರುವುದು ; ಸಂಗತಿಯನ್ನು ವಿವರವಾಗಿ ತಿಳಿಯಲು ಕುತೂಹಲ ಭರಿತರಾಗಿರುವೆವು ವಿಸ್ತರಿಸಿ ಹೇಳಬೇಕು.

ಕಬೀರ—ಪೂಜ್ಯರೇ ! ತಮ್ಮ ಆಜ್ಞೆಗೆ ಪ್ರತಿಹೇಳಲಾರೆನು ; ಲಾಲಿಸಬೇಕು. ತಮ್ಮ ಸತ್ಕಾರಕ್ಕೆ ಮನೆಯಲ್ಲಿ ಆಹಾರ ಪದಾರ್ಥಗಳಿಲ್ಲದಿದ್ದ ಕಾರಣ ಚೌರ್ಯದಿಂದ ತರಲು ಹೊರಟು ಪದಾರ್ಥಗಳನ್ನು ತರುವಲ್ಲಿ ಬಾಲಕನು ಆ ಮನೆಯೊಳಗೆ ಸಿಕ್ಕಿಬಿದ್ದನು. ಮನೆಯವರು ಅವನ ಕಾಲುಗಳನ್ನು ಹಿಡಿದೆಳೆಯುತ್ತಿರಲು ಅವನು ಕಿಟಿಕಿಯಲ್ಲಿ ತಲೆಯಿಟ್ಟು ತನ್ನ ಗುರುತು ತಿಳಿದರೆ ಅನರ್ಥವಾಗಿ. ಅತಿಥಿ ಸತ್ಕಾರಕ್ಕೆ ಭಂಗ ಬರುವುದೆಂದು ತನ್ನ ತಲೆಯನ್ನು ಕಡಿದು ತೆಗೆದ ಕೊಂಡು ಹೋಗುವಂತೆ ನನ್ನನ್ನು ಕೂಗಿ ಹೇಳಿದನು. ಆಗ ಪುತ್ರನ ಪ್ರಾಣಕ್ಕಿಂತಲೂ ಅತಿಥಿಸತ್ಕಾರವೇ ಹೆಚ್ಚಾದುದಾಗಿ ನನಗೆ ಕಂಡಕಾರಣ ನಾನೇ ಅವನ ತಲೆಯನ್ನು ಕಡಿದು ತಂದೆನು. ನ್ಯಾಯ ವಿಚಾರಣೆಯಾದ ಮೇಲೆ ರಾಜಸೇವಕರು ಆ ಮುಂಡವು ಯಾರದೆಂಬುದನ್ನು ಕಂಡುಹಿಡಿಯಲು ಹೀಗೆ ತೂಗ ಹಾಕಿರುವರು ಇದನ್ನು ನೋಡಿ ಆಕೆಗೆ ಚಿತ್ತವಿಕಾರವುಂಟಾಗಿರುವುದು.

ಸಾಧುಗಳು— ಆಹಾ ! ಕಬೀರದಾಸರೇ ! ನೀವು ಎಂತಹ ಮಹನೀಯರು ! ಎಂತಹ ಭಕ್ತರು ! ಎಂತಹ ಸ್ಥಿರಚಿತ್ತರು ! ಆಹಾ ! ಸತಿಯೂ ಪತಿಯೂ ಪುತ್ರನೂ ! ಒಂದೇ ವಿಧವಾದ ಚಿತ್ತದಿಂದ ಈ ರೀತಿ ಸಾಧು ಸೇವೆ ಮಾಡಿದುದು ಲೋಕಾತಿಶಯವಾದ ವಿಚಾರವು ! ಪ್ರಾಣವನ್ನು ಕೊಟ್ಟಾದರೂ ಅತಿಥಿಸತ್ಕಾರ ಮಾಡಿದ ನಿಮ್ಮಗಳ ಜ್ಞಾನವು ಅಸಾಧಾರಣವಾದುದು. ಈಗ ಆ ನಿಮ್ಮ ಪುತ್ರನ ತಲೆಯು ಎಲ್ಲಿರುವುದು ?

**ಕಬೀರ**—ಪೂಜ್ಯರೇ ! ನನ್ನ ಪತ್ನಿಯು ಅದನ್ನು ನೋಡಲಾರದೆ ಗಂಗಾನದಿಯಲ್ಲಿ ಎಸೆದಳು.

**ಸಾಧುಗಳು**—ಚಿಂತೆಯಿಲ್ಲ. ಕುಮಾರನ ಶಿರಸ್ಸನ್ನು ತಂದುಕೊಡುವಂತೆ ಗಂಗಾದೇವಿಯನ್ನು ಪ್ರಾರ್ಥಿಸಿ. ಆಗ ಶ್ರೀರಾಮಚಂದ್ರನ ಕರುಣದಿಂದ ನಿಮಗೆ ಕುಶಲವುಂಟಾಗುವುದು.

**ಕಬೀರ**—ಪೂಜ್ಯರ ಅಪ್ಪಣೆಯಂತೆ ಆಗಲಿ.

**೧ನೆಯ ಸಾಧು**—ಆಹಾ ! ಈ ದಂಪತಿಗಳಲ್ಲವೇ ಮಹನೀಯರು ! ಆಶಾಪಾಶವಿವರ್ಜಿತರು ! ಸಂಸಾರಬಂಧವಿಮುಕ್ತರು. ಮುಕ್ತಿಪ್ರಾಸಾದದ ಸೋಪಾನಗಳನ್ನು ಹತ್ತಿರುವ ಸಾಧು ರತ್ನಗಳು ! ಪರಮಾತ್ಮನು ಇವರನ್ನು ಪರೀಕ್ಷಿಸಲು ಮಾಡಿದ ಪ್ರಯತ್ನಕ್ಕೆ ಹೆದರದೆ ಉಚಿತಮಾರ್ಗದಲ್ಲಿ ನಡೆದು ಸುಜ್ಞಾನ ಪ್ರಕಾಶದಿಂದ ಪರಮಾತ್ಮನ ದಿವ್ಯ ಸ್ವರೂಪವನ್ನು ನೋಡಿ ಆತನಲ್ಲಿ ಐಕ್ಯರಾಗತಕ್ಕವರು !

**೨ನೆಯ ಸಾಧು**—ಆಹಾ ! ನಿಜ ! ಇವರು ಶ್ರೀರಾಮಚಂದ್ರನ ಅನುಗ್ರಹಕ್ಕೆ ಪಾತ್ರರೇ ನಿಜ

**ಬೀಬಿ**—೩೦

**ಶಾ॥** ಗಂಗೇ ನಿರ್ಮಲವಾರಿಪೂತ ಜಗತೀ ಸಂಘೇ ಶಿವೋದ್ಯಜ್ಜಟಾ ।
ರಂಗತ್ತುಂಗ ತರಂಗೆ ಸೇವಕ ಮಹಾಪಾಪಾಳಿ ಭಂಗೇ ಕೃಪಾ ॥
ಪಾಂಗೇ ಶ್ರೀಹರಿ ಪಾದಪಂಕಜ ರಜಸ್ಸಂಗೇ ಸ್ಫುರದ್ದಿವ್ಯಭು ।
ಭ್ರಾಂಗೇ ಮಂಗಳ ಮಿತ್ತು ಪಾಲಿಸೊಲವಿಂ ದೇವೀ ಮಹಾಜಾಹ್ನವೀ ॥

ಪಾವನಳಾದ ಗಂಗಾದೇವಿಯೇ ! ನಿನಗೆ ನಮಸ್ಕರಿಸುವೆವು. ನಮ್ಮ ಪುತ್ರನ ಶಿರಸ್ಸನ್ನು ಕರುಣಿಸು.

**ಗಂಗಾದೇವಿ**—(ಪ್ರತ್ಯಕ್ಷಳಾಗಿ) ಭಕ್ತಶಿರೋಮಣಿಗಳಾದ ದಂಪತಿಗಳಿರಾ ! ನಿಮ್ಮ ಭಕ್ತಿಯೂ, ಮಹಿಮೆಯೂ, ಅತಿಶಯವಾದುವು, ಇದೋ ನಿಮ್ಮ ಪುತ್ರನ ಶಿರಸ್ಸನ್ನು ತೆಗೆದುಕೊಳ್ಳಿ. ನಿಮ್ಮ ಕುಮಾರನು ಜೀವಿತನಾಗುವನು. (ಕೊಟ್ಟು ಅಂತರ್ಧಾನಳಾಗುವಳು)

**ಕಬೀರ-ಬೀಬಿ**—ಮಾತೇ ! ಧನ್ಯರಾದೆವು (ತಲೆಯನ್ನು ಸಾಧುಗಳ ಕೈಗೆ ಕೊಟ್ಟು) ಪೂಜ್ಯರೇ ! ಇದೋ ಗಂಗಾದೇವಿಯು ಕುಮಾರನ ತಲೆಯನ್ನು ಅನುಗ್ರಹಿಸಿರುವಳು.

ಸಾಧುಗಳು—ಸಂತೋಷ ಬನ್ನಿ. (ತಲೆಯನ್ನು ತೆಗೆದು ಕಮಾಲನ ಮುಂಡಕ್ಕೆ ಹತ್ತಿಸಿ ರಾಮಭಜನೆ ಮಾಡುವರು.)

೩೧ ಕಂ|| ಮೃತ ಸಂಜೀವನ ರಾಮಾ |
ಮತಿಗತಿಸಂದಾತರಾಮ ಮಹಿಮಾರಾಮಾ ||
ಅತುಳ ದಯಾ ಮಯ ರಾಮಾ |
ಸುತನಂ ಬರ್ದುಕಿಪುದು ಸೂರ್ಯವಂಶಲಲಾಮಾ ||೨೯||

ಕಮಾಲ್‌ದಾಸ್ (ಎಂದು ಕೂಗುವರು)

ಕಮಾಲ್—(ಎದ್ದು) ರಾಮ, ರಾಮ, ಪೂಜ್ಯರೇ! ವಂದಿಸುವೆನು. ತಂದೆಯೇ! ವಂದಿಸುವೆನು. ಮಾತೆಯೇ ನಮಸ್ಕರಿಸುವೆನು. (ಎಲ್ಲರಿಗೂ ನಮಸ್ಕರಿಸುವನು.)

ಸಾಧುಗಳು—ಬಾಲನೇ! ಚಿರಂಜೀವಿಯಾಗು.

ಬೀಬಿ—ಪುತ್ರಾ! ಚಿರಂಜೀವಿಯಾಗು.

೩೨ ಕಂ|| ಮೃತಿಯಂ ಗೆಲ್ದೀ ತೆರದಿಂ |
ದತಿಶಯ ತೇಜೋಭಿರಾಮನೆನಿಸುತ ಬಂದೈ ||
ಸುತ ನಿನ್ನ ಕಂಡು ನಾಂ ಧ |
ನ್ಯತೆಯಾಂತೆಂ ಸಾಧು ಕರುಣದಿಂದಂ ತನುಜಾ ||೩೦||

ಕಬೀರ—(ಆಲಿಂಗಿಸಿ) ಸುಪುತ್ರಾ! ಸಾಧುಸತ್ಕಾರಕ್ಕಾಗಿ ಶರೀರವನ್ನು ಕೊಟ್ಟಿದ್ದ ನೀನೇ ಧನ್ಯನು. ಈ ಸಾಧುಗಳು ಮತ್ತೆ ನಿನಗೆ ಪ್ರಾಣವನ್ನಿತ್ತು ಅನುಗ್ರಹಿಸಿರುವರು.

ಕಮಾಲ್—ತಂದೆಯೇ! ಭಗವದ್ಭಕ್ತರಲ್ಲಿ ಹೀಗೆ ದಯೆಯನ್ನು ತೋರಿಸುವ ಸಾಧುಗಳೇ ದೇವರಲ್ಲವೇ?

ಕಬೀರ-ಬೀಬಿ—ನಿಜ! ನಿಜ! ಸಂದೇಹವೇನು?

**ಸಾಧುಗಳು**—ಕಬೀರ ಮಹನೀಯರೇ ! ನೀವು ಮತದಲ್ಲಿ ಮುಹಮ್ಮದೀಯು ರಾದರೂ, ಶ್ರೀರಾಮಚಂದ್ರನಾರಾಧನೆಯಿಂದ ಜ್ಞಾನವನ್ನಾರ್ಜಿಸಿ ಮುಕ್ತಿ ಸೌಭಾಗ್ಯವನ್ನು ಪಡೆಯುವ ಕ್ರಮದಲ್ಲಿರುವುದಾಶ್ಚರ್ಯವು ?

**ಕಬೀರ**—ಪೂಜ್ಯರೇ ! ಇದರಲ್ಲಿ ಆಶ್ಚರ್ಯವೇನಿರುವುದು ? ಮುಹಮ್ಮದೀಯನಾದರೇನು ? ಬ್ರಾಹ್ಮಣನಾದರೇನು ? ಕ್ಷತ್ರಿಯನಾದರೇನು ? ಶೈವನಾದರೇನು ? ವೈಷ್ಣವನಾದರೇನು ? ಕ್ರಿಸ್ತನಾದರೇನು ? ಯಾವ ಮತದವನಾದರೇನು ? ಇವರೆಲ್ಲರನ್ನೂ ಪರಿಪಾಲಿಸತಕ್ಕ ದೇವರು ಒಬ್ಬನೇ ಅಲ್ಲವೇ ? ಆತನು ಸರ್ವಜ್ಞನೂ, ಸರ್ವಾಂತರ್ಯಾಮಿಯೂ, ಸರ್ವಶಕ್ತನೂ ಸರ್ವಶಬ್ದವಾಚ್ಯನೂ ಅಲ್ಲವೇ ? ಆತನಿಗೆ ಸಲ್ಲದಿರುವ ಹೆಸರಾವುದು ? ರಾಮಚಂದ್ರನೆಂದಾಗಲಿ, ಪರಮಶಿವನೆಂದಾಗಲಿ, ಭೈರವನೆಂದಾಗಲಿ, ಅಲ್ಲಾ ಎಂದಾಗಲಿ, ಕ್ರಿಸ್ತನೆಂದಾಗಲಿ, ಅರ್ಹತ್ ಎಂದಾಗಲಿ ಯಾವ ಹೆಸರಿನಿಂದ ಆರಾಧಿಸಿದರೂ ಆ ಜಗತ್ಕರ್ತನಿಗೇ ಆ ಪೂಜೆಯೂ, ಸೇವೆಯೂ, ಸ್ತೋತ್ರವೂ, ಅರ್ಪಿತವಾಗಿ ಆತನನುಗ್ರಹಕ್ಕೆ ನಾವುಗಳು ಪಾತ್ರರಾಗುವೆವಲ್ಲವೇ ? ಸರ್ವದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ" ಎಂಬಂತೆ ಯಾರುಯಾರು ಯಾವ ರೀತಿಯಲ್ಲಿ ಯಾವ ಹೆಸರಿನಿಂದ ಆತನನ್ನರ್ಚಿಸಿದರೂ ಅದು ಆ ಪರಮಾತ್ಮನಿಗೇ ಅರ್ಪಿತವಾಗುವುದೆಂಬುದು ತಮಗೆ ಗೋಚರವೇ ಇದೆಯಷ್ಟೆ ! ಜಾತಿಗಳು ಆಚಾರ ಭೇದಗಳಿಂದ ಹುಟ್ಟಿದವುಗಳು ; ದೇವತಾರಾಧನೆಯನ್ನು ಮಾಡಲು ತನ್ನಲ್ಲಿರುವ ಆ ಪರಮಾತ್ಮನಂಶದ ಪ್ರೇರಣೆಯೇ ಮುಖ್ಯವು. ಪರಪ್ರೇರಣೆಯಿಂದಾಗಲಿ, ನಿರ್ಬಂಧದಿಂದಾಗಲಿ ಕಾಣುವ ಬಲಾತ್ಕಾರ ಬಾಹ್ಯಭಕ್ತಿಯು ನಿಜವಾದ ಭಕ್ತಿ ಯೆನಿಸಲಾರದು. ಮುಖ್ಯವಾಗಿ ಪ್ರತಿಯೊಂದು ಮತದ ತತ್ವವೂ ಜಗತ್ಕರ್ತನಾದ ಪರಮಾತ್ಮನೆಂಬ ಕೇಂದ್ರವನ್ನು ಗುರಿಯಾಗಿಟ್ಟುಕೊಂಡು ಆಯಾ ಆಚಾರಾನುಸಾರವಾದ ಕ್ರಮವೆಂಬ ಗೆರೆಯ ಮೇಲೆ ನಡೆಯುತ್ತಿದೆಯಷ್ಟೆ ! ಅದರಲ್ಲಿ ಯಾವುದನ್ನು ಅನುಸರಿಸಿದರೂ ಮನುಷ್ಯನು ಅದೇ ಕೇಂದ್ರವನ್ನೇ ಸೇರಿ ಐಕ್ಯನಾಗುವನು. ಮಾರ್ಗವು ಅವನವನ ಪೂರ್ವ ಕರ್ಮಾನುಸಾರ ದೊರಗುವುದು. ಆದದರಿಂದ ದೇವತಾರಾಧನೆಗೂ ಭಕ್ತಿಗೂ ಅನೇಕ ಮಾರ್ಗಗಳಿವೆಯೆಂದು

ತಿಳಿದು ಶ್ರೀರಾಮಚಂದ್ರನು ಪ್ರೇರಿಸಿದಂತೆ ನಾನು ಆತನನ್ನೇ ಆರಾಧಿಸುತ್ತಿರುವೆನು.

**ಸಾಧುಗಳು**— ಕಬೀರದಾಸರೇ ! ನೀವು ತತ್ತ್ವಜ್ಞರಾದ ಮಹನೀಯರು. ನಿಮ್ಮೆಲ್ಲರಿಗೂ ಶ್ರೀರಾಮಚಂದ್ರನು ಮಂಗಳವನ್ನುಂಟುಮಾಡುವನು. ಇನ್ನು ನಾವು ಪ್ರಯಾಣಮಾಡುವೆವು.

**ಕಬೀರ**— ಪೂಜ್ಯರ ಇಷ್ಟದಂತೆ ಆಗಲಿ. (ಸಾಧುಗಳು ಹೋಗುವರು)

**ಮೂವರೂ**—

**ಕಂ||** ರಾಮಾ ಜಗದಭಿರಾಮಾ |
ಸೋಮಾನಲ ಸೂರ್ಯಧಾಮ ರವಿಕುಲಸೋಮಾ ||
ಕಾಮಪ್ರದ ನಿಷ್ಕಾಮಾ |
ಸೀಮಾತಿಗ ಮಹಿಮ ವಿಜಯ ಸುರನುತ ಸೀಮಾ ||೩೧||

(ಹೋಗುವರು.)

ದ್ವಿತೀಯಾಂಕಂ ಸಂಪೂರ್ಣಂ.



# ತೃತೀಯಾಂಕಂ.

ದೃಶ್ಯ ೧ (ಕಾಶೀನಗರದ ಬೀದಿಯಲ್ಲಿ ಬಹುಜನ ಸಾಧುಗಳು ಭಜನೆ ಮಾಡುತ್ತ ಬರುವರು.)

೧ನೆಯ ಗುಂಪು— || ಶರಷಟ್ಪದಿ ||

ಜಯ ಜಯ ವಿಠ್ಠಲ | ಭಯಹರ ವಿಠ್ಠಲ |
ನಯಗುಣ ಭಾಸುರ ಹರಿವಿಠಲ ||
ಜಯಜಯ ಮಂಗಳ | ಮಯಿ ಸುಶ್ಯಾಮಲ |
ಸುಯಶೋಧನ ಜಯ ಹರಿವಿಠಲ ||

೨ನೆಯ-ವಿಠ್ಠಲ ಮಾಧವ | ವಿಠ್ಠಲ ಭೂಧವ |
ವಿಠ್ಠಲ ಯಾದವ ಕುಲವಿಭವ ||
ವಿಠ್ಠಲ ಜಿತಭವ | ವಿಠ್ಠಲನುತ ಭವ |
ವಿಠ್ಠಲ ಕೇಶವ ಜಯ ವಿಠಲ || ೩೩ ||

೩ನೆಯ-ರಾಮ ದಯಾಮಯ | ರಾಮ ನಿರಾಮಯ |
ರಾಮ ಶುಭಾಶ್ರಯ ರಿಪುವಿಜಯ ||
ರಾಮ ಮಹೋದಯ | ರಾಮ ಕಳೋದಯ |
ರಾಮ ಧರಾತನಯಾಂಕ ಜಯ ||

ವಿಠಲದಾಸರು—ನಿತ್ಯಾನಂದ ಸ್ವಾಮಿಗಳಿಗೆ ನಮಸ್ಕಾರ ! ಯಾವಾಗ ಆಗಮನವು ?

ನಿತ್ಯಾನಂದರು—ನಮೋ ನಮಃ, ವಿಠಲ ಸಾಧುಗಳೇ ! ಈಗತಾನೇ ಬಂದೆವು. ತಮ್ಮಾಗಮನವು ಯಾವಾಗ ?

ವಿಠಲದಾಸರು— ಸ್ವಾಮಿಾ ! ನಾನು ಈ ಸಾಧುಗಳೊಡನೆ ಈ ದಿನ

ಪ್ರಾತಃಕಾಲ ಬಂದೆನು. ಮಾಧವದಾಸರೇ ಮೊದಲಾದ ಸಾಧುಮಹ ನೀಯರು ಶಿಷ್ಯರೊಡನೆ ಮಾರ್ಗದಲ್ಲಿ ಸಂಧಿಸಿ ಎಲ್ಲರೂ ಜೊತೆಯಲ್ಲಿ ಬಂದೆವು.

**ಸತ್ಯಾನಂದರು**— ಬಹಳ ಸಂತೋಷ, ನಮ್ಮ ಪ್ರಾಂತ್ಯದಿಂದಲೂ ಅನೇಕ ಭಕ್ತಶಿರೋಮಣಿಗಳು ಬಂದಿರುವರು. ಕಬೀರದಾಸರು ಮಹಾನು ಭಾವರು ; ಇಂತಹ ಮಹಾರಾಮೋತ್ಸವವನ್ನು ಏರ್ಪಡಿಸಿರುವ ಅವರ ಪುಣ್ಯವು ಅಸದೃಶವಾದುದು.

**ವಿಠಲದಾಸರು**— ನಿಜ ! ನಿಜ ! ನಾವುಗಳು ಇನ್ನು ಅವರ ಬಳಿಗೆ ಹೋಗಿ ಉತ್ಸವ ವಿಚಾರಗಳನ್ನು ತಿಳಿಯೋಣ.

**ಸತ್ಯಾನಂದರು**— ಆಗಬಹುದು. (ಹೋಗುವರು.)

ದೃಶ್ಯ ೨ (ಕಬೀರನು ಮನೆಯಲ್ಲಿ ಬೀಬಿಗೆ ಸಾಧುಗಳ ಮಹಿಮೆಯನ್ನು ಹೇಳುತ್ತಿರುವನು.)

**ಕಬೀರ**— || ಸೀಸ ಪದ್ಯ ||

ಸಾಧುಸೇವೆಯೆ ಜಗದಿ ಸಕಲಪಾಪವ ಹರಿಸಿ
ಪುರುಷಾರ್ಥಗಳನೀವ ಪುಣ್ಯಮೆಸಗಿ |
ಕಾಮಾದಿಷಡ್ವರ್ಗ ಘನತಮೋರಾಶಿಯನು
ದಹಿಸಿ ಮಾನಸಲೋಚನಗಳ ತೆರೆದು ||
ಲೋಕಮೆಲ್ಲವು ನೋಡೆ ಶೋಕಸಾಗರವೆನಿಸಿ
ಕಾಮಾಭಿಮಾನಗಳ ಕಡೆಯ ಗೈಸಿ |
ಶ್ರೀಪರಂಜ್ಯೋತಿಸ್ವರೂಪನಾ ಸಾಯುಜ್ಯ
ಪದವಿಯಂ ಕುಡುವುದಾಪತ್ತನಳಿದು ||
ಗೀ|| ಆದರಿಂದೆ ಮಾನವಂ ಮುದದಿ ವಿಮಲ |
ಹೃದಯದಿಂ ವರ್ತಿಸುತೆ ಪದೆದು ರಚಿಸಿ ||
ಸಾಧುಸೇವೆಯ ನೀಶ ಸನ್ನಿಧಿಯನು |
ಸಾಧಿಪುದೆ ಕಾರ್ಯಮಲೆ ಸಾಧ್ವಿ ಜಗದಿ ||೩೬||

ಪ್ರಿಯೇ ! ಸಾಧುಗಳ ಮಹಿಮೆಯು ನಿನಗೆ ತಿಳಿಯಿತೇ ?

ಬೀಬಿ—ಪ್ರಿಯನೇ ! ಅದನ್ನು ಸ್ವಪ್ನವೆಂದು ಹೇಳಲಾದೀತೇ ? ಲೋಕದಲ್ಲಿ ಮೃತರಾದವರನ್ನು ಬದುಕಿಸುವುದು ಅಸಾಧ್ಯಕಾರ್ಯವು; ಅದೂ ಸಹ ಅವರನುಗ್ರಹದಿಂದ ಸಾಧ್ಯವಾಗಿ ಭಗವದ್ಭಕ್ತರ ಮಹಿಮೆಯು ವ್ಯಕ್ತವಾಯಿತು. ಅವರನುಗ್ರಹಕ್ಕೆ ಪಾತ್ರರಾದ ನಾವೇಧನ್ಯರು !

ಕಬೀರ—ನಿಜ ! ಕಮಾಲದಾಸನೆಲ್ಲಿ ?

ಬೀಬಿ—ಪ್ರಾತಸ್ನಾನಕ್ಕಾಗಿ ಗಂಗಾಘಟ್ಟಕ್ಕೆ ಬಂದಿದ್ದನು, ಈಗತಾನೇ ಎಲ್ಲಿಯೋ ಹೋಗಿರಬೇಕು.

ಕಮಾಲ—(ಪ್ರವೇಶಿಸಿ) ಅಪ್ಪಾ ! ಅಪ್ಪಾ !!

ಕಬೀರ—ಮಗೂ ! ಕಮಾಲ್ ! ಎಲ್ಲಿ ಹೋಗಿದ್ದೆ ?

ಕಮಾಲ—ಅಪ್ಪಾ ! ನಾನು ಶ್ರೀರಾಮದೇವಸ್ಥಾನಕ್ಕೆ ಹೋಗಿ ಬರುತ್ತಿದ್ದೆನು. ಆಗ ಶ್ಯಾಮಲದಾಸರು, ವಿಠಲದಾಸರು, ಬ್ರಹ್ಮಾನಂದರೇ ಮೊದಲಾದ ಅನೇಕ ಮಹನೀಯರುಗಳಂತೆ, ನಮ್ಮ ದೇಶದ ಎಲ್ಲಾ ಕಡೆಗಳಿಂದಲೂ ಶಿಷ್ಯಸಹಿತರಾಗಿ ತಂಡತಂಡಗಳಾಗಿ ಬರುತ್ತಿದ್ದರು. ಇವರು ಯಾರೆಂದು ವಿಚಾರಿಸುವಲ್ಲಿ ಕಬೀರದಾಸರ ಮನೆಗೆ ರಾಮೋತ್ಸವಕ್ಕೆ ಬಂದಿರುವ ಸಾಧುಗಳೆಂದು ತಿಳಿಯಿತು; ನಮ್ಮ ಮನೆಯಲ್ಲಿ ನಡೆಯುವ ರಾಮೋತ್ಸವವು ಯಾವುದಪ್ಪಾ ?

ಬೀಬಿ—ಇದೇನು ? ಆಶ್ಚರ್ಯ ವಿಷಯವನ್ನು ಹೇಳುವನು !

ಕಬೀರ—ಮಗೂ ! ನಾನು ಯಾವ ಉತ್ಸವವನ್ನೂ ಏರ್ಪಡಿಸಿಲ್ಲವಲ್ಲಾ ! ಇದು ಬಹಳ ವಿಚಿತ್ರವಾದ ವಿಷಯವೇ ! ಚೆನ್ನಾಯಿತು ! ಶ್ರೀರಾಮಚಂದ್ರನ ಸಂಕಲ್ಪವು ಇನ್ನೂ ಯಾವರೀತಿ ಇರುವುದೋ ಕಾಣೆನು. ಆತನಿಗಿಷ್ಟಬಂದಂತೆ ನಮ್ಮಿಂದ ಸೇವೆಯನ್ನು ಕೈ ಕೊಳ್ಳುವುದು ಆತನ ಲೀಲೆಯು ! ಏನಾಗುವುದೋ ನೋಡುವ. ಅವರುಗಳು ಬಂದನಂತರ ವಿಷಯವು ಸ್ಪಷ್ಟವಾಗುವುದು.

ವಿಠಲ—(ಸಾಧುಗಳೊಡನೆ ಪ್ರವೇಶಿಸಿ) ಕಬೀರ ಮಹನೀಯರಿಗೆ ವಂದನೆಗಳು, ಕುಶಲವೇ ?

ಕಬೀರ—ಸರ್ವರಿಗೂ ವಂದನೆಗಳು ! ಶ್ರೀರಾಮಚಂದ್ರನನುಗ್ರಹವು ! ಹೀಗೆ ದಯಮಾಡಿಸಬೇಕು.

ಶ್ಯಾಮಲದಾಸರು—ನಿಮ್ಮ ಲಗ್ನಪತ್ರಿಕೆಗಳು ತಲಪಿ, ತಾವು ರಾಮೋತ್ಸವವನ್ನು ಏರ್ಪಡಿಸಿರುವುದಕ್ಕಾಗಿ ಬಹಳ ಸಂತೋಷವಾಯಿತು ನಾಳಿನಿಂದ ತಾನೇ ಉತ್ಸವವು ಪ್ರಾರಂಭವಾಗುವುದು ?

ಕಬೀರ—(ಆತ್ಮಗತ) ಅಪ್ರಾರ್ಥಿತರಾಗಿ ಎಷ್ಟು ಮಂದಿ ಸಾಧುಗಳು ಶ್ರೀರಾಮಸೇವೆಗಾಗಿ ನನ್ನನ್ನು ಕುರಿತು ಬಂದಿರುವದು ಅತ್ಯಾಶ್ಚರ್ಯವು ! ಶ್ರೀರಾಮಚಂದ್ರಾ! ಏನೇನು ಲೀಲೆಗಳನ್ನು ನಡೆಯಿಸಿರುವೆ? ಇವರಿಗೆ ಯಾರು ಈರೀತಿ ಪತ್ರಗಳನ್ನು ಬರೆದಿರಬಹುದು ? (ಆಲೋಚಿಸಿ) ಹೇಗಾದರೂ ಆಗಲಿ ! ಇಷ್ಟು ಮಂದಿ ಮಹನೀಯರ ದರ್ಶನವನ್ನೂ ಸೇವೆಯನ್ನೂ ನನಗೊದಗಿಸಿದನಲ್ಲವೇ ಶ್ರೀರಾಮಚಂದ್ರನು ! ಇನ್ನು ನಾನು ಪತ್ರಗಳನ್ನು ಬರೆಯಲಿಲ್ಲವೆಂದು ಪ್ರಕಟಸಬಾರದು. ಒದಗಿದ ಮಹೋತ್ಸವವನ್ನು ಹೇಗಾದರೂ ನಡೆಯಿಸಿಯೇ ತೀರಬೇಕು. (ಪ್ರಕಾಶಂ) ಪೂಜ್ಯರೇ ! ನಾಳಿನದಿನವೇ ಉತ್ಸವವು ಪ್ರಾರಂಭಸಲ್ಪಡುವುದು ತಾವು ಭಾಗೀರಥಿಯಲ್ಲಿ ಸ್ನಾನಾಹ್ನಿಗಳನ್ನು ತೀರಿಸಿಕೊಂಡು ದಯಮಾಡಿಸಬೇಕು

ಸಾಧುಗಳು—ಆಗಬಹುದು. (ಹೋಗುವರು.)

ಬೀಬಿ—ಪ್ರಿಯನೇ ! ಏನಿದು ? ವಿಚಿತ್ರವು !! ಉತ್ಸವವೆಂದರೇನು ? ಲಗ್ನಪತ್ರಿಕೆಗಳೆಂದರೇನು ? ಬರೆದಿರೆಂದರೇನು ? ಇಷ್ಟುಮಂದಿ ಮಹಾತ್ಮರಿಗೆ ಒಂಭತ್ತು ಹತ್ತು ದಿನಗಳವರಿಗೆ ಸತ್ಕಾರಮಾಡಿ ಈ ನಿತ್ಯದರಿದ್ರರಾದ ನಾವು ರಾಮೋತ್ಸವವನ್ನು ಸಾಂಗವಾಗಿ ನೆರವೇರಿಸುವುದೆಂದರೇನು ?

ಕಬೀರ—ಪ್ರಿಯೇ ! ಏತಕ್ಕೆ ಹೆದರುವೆ ? ಇದೆಲ್ಲವೂ ಶ್ರೀರಾಮಚಂದ್ರನ ಲೀಲೆಯು ! ವೃದ್ಧ ಬ್ರಾಹ್ಮಣನಾಗಿ ಬಂದು ನನ್ನಿಂದ ವಸ್ತ್ರವನ್ನು ಹೊದ್ದಿಸಿಕೊಂಡು ಮತ್ತೆ ಅದನ್ನು ನಮ್ಮ ಮನೆಗೇ ಸೇರಿಸಿದವನು ಯಾರು ?

ಕಮಾಲ್—ಶ್ರೀರಾಮಚಂದ್ರನು.

ಕಬೀರ—ಅತಿಥಿಗಳ ರೂಪದಿಂದ ಬಂದು ನಮ್ಮನ್ನು ಪರೀಕ್ಷಿಸಿ ಪುತ್ರಶೋಕದಿಂದ ತಪಿಸುತ್ತಿದ್ದ ನಮಗೆ ಪುತ್ರನನ್ನು ಬದುಕಿಸಿಕೊಟ್ಟು ಆನಂದವ

ನ್ನುಂಟುಮಾಡಿದವನು ಯಾರು ? ಶ್ರೀರಾಮಚಂದ್ರನಲ್ಲವೇ ? ಇದರಂತೆಯೇ ಭಕ್ತಾನುಗ್ರಹಕ್ಕಾಗಿ ಈ ಪತ್ರಗಳನ್ನು ಸಾಧುಗಳಿಗೆ ಬರೆಸಿರುವನೂ ಶ್ರೀರಾಮಚಂದ್ರನೇ ಏತಕ್ಕೆ ಆಗಿರಬಾರದು ? ಆವಕಾರಣ ಈ ಮಹೋತ್ಸವವನ್ನು ನೆರವೇರಿಸುವ ಭಾರವೂ ಆತನನ್ನು ತಾನೇ ವಹಿಸಿರುವುದು ! ಕಾರ್ಯವನ್ನು ಪ್ರಯತ್ನಿಸುವುದಕ್ಕೂ ಮಾಡಿಸುವುದಕ್ಕೂ ಮಾಡುವುದಕ್ಕೂ ಅದರ ಫಲಾನುಭವಕ್ಕೂ ಯಾರು ಹೊಣೆಯು? ಶ್ರೀರಾಮಚಂದ್ರನಲ್ಲವೆ ? ಆದುದರಿಂದ ಈ ಕಾರ್ಯವನ್ನು ಆತನೇ ಹೇಗೋ ನೆರವೇರಿಸುವನು ಇದಕ್ಕೆ ನಾವೇಕೆ ಚಿಂತಿಸಬೇಕು ? ಇರಲಿ. ನಗರದಲ್ಲಿ ಹೋಗಿ ಸಾಧ್ಯವಾದ ಪ್ರಯತ್ನಗಳನ್ನು ಮಾಡುವೆನು

**ಕಾಕೋದರ**—(ಪ್ರವೇಶಿಸಿ ಆತ್ಮಗತ) ನನ್ನ ಪ್ರಯತ್ನವು ಫಲಿಸುವ ಕಾಲವೊದಗಿದಂತಿರುವುದು ! ಸಾಧುಗಳನೇಕರು ಬಂದಿರುವರು (ಕಬೀರನನ್ನು ನೋಡಿ) ದಾಸರಿಗೆ ವಂದನೆ.

**ಕಬೀರ**— ವಂದನೆ ಸ್ವಾಮಿ ! ದಯಮಾಡಿಸಬೇಕು. ಏನು ? ಬಹುದಿನಗಳಿಗೆ ದರ್ಶನವನ್ನಿತ್ತಿರಲ್ಲಾ !

**ಕಾಕೋದರ**—ಮತ್ತೇನೂ ಇಲ್ಲವು, ತಮ್ಮ ಮನೆಗೆ ಬಹುಜನ ಸಾಧುಗಳು ದಯಮಾಡಿಸುತ್ತಿರುವುದನ್ನು ನೋಡಿದೆನು. ಅದರಿಂದ ಕಾರಣವೇನೆಂದಾಶ್ಚರ್ಯದಿಂದ ಹೀಗೆಯೇ ತಮ್ಮನ್ನು ನೋಡಿಕೊಂಡು ಹೋಗೋಣವೆಂದು ಬಂದೆನು.

**ಕಬೀರ**—ಬಹಳ ಸಂತೋಷ. ಶ್ರೀರಾಮ ನವರಾತ್ರಿಯ ಉತ್ಸವಕ್ಕೆಂದು ಈ ನಮ್ಮ ಭರತಖಂಡದ ಸಾಧುಗಳನೇಕರು ದಯಮಾಡಿಸಿರುವರು; ನಾಳೆಯಿಂದ ಉತ್ಸವವು ಆರಂಭವಾಗಬೇಕಾಗಿದೆ.

**ಕಾಕೋದರ**—ಬಹಳ ಸಂತೋಷ, ಬಹಳ ಸಂತೋಷ, ತಾವು ಮಹನೀಯರು. ಸದಾ ದೇವತಾಸೇವೆಯಲ್ಲಿಯೇ ಕಾಲವನ್ನು ಕಳೆಯುತ್ತ, ಸಂತೋಷದಿಂದಿರುವಿರಿ ! ಆದರೆ ಉತ್ಸವಕ್ಕಾಗಿ ಎಲ್ಲವೂ ಸಿದ್ಧವಾಗಿರುವುದಷ್ಟೆ ?

**ಕಬೀರ**— ಯಾವುದೊಂದೂ ಸಿದ್ಧವಿಲ್ಲ, ಈಗ ಮಹೋತ್ಸವವನ್ನು ನಡೆಯಿಸಬೇಕಾಗಿದೆ. ನನ್ನ ಸ್ಥಿತಿಯನ್ನು ತಾವು ಬಲ್ಲಿರಷ್ಟೆ ? ಇನ್ನು ತಮ್ಮಂ

ಧವರ ಸಹಾಯದಿಂದ ಮುಂದಿನ ಕಾರ್ಯಕಲಾಪಗಳು ನೆರವೇರಬೇಕಾಗಿರುವುವು.

**ಕಾಕೋದರ**—ಓಹೋ! ಬಹಳ ಸಂತೋಷ. ನನ್ನ ಕೈಯಿಂದಾಗುವ ಸಹಾಯವನ್ನು ಮಾಡಲು ಸಿದ್ಧನಾಗಿರುವೆನು. ಅಂತಹ ವಿಷಯವಿದ್ದರೆ ಹೇಳಿ.

**ಕಬೀರ**—ಸ್ವಾಮಿ! ಶ್ರೀರಾಮ ನವರಾತ್ರಿಯ ಉತ್ಸವಕ್ಕೆ ಏನಾಗಬೇಕೆಂಬುದು ತಮಗೆ ತಿಳಿಯದ ವಿಷಯವಲ್ಲ. ಅಲ್ಲದೆ ಸರ್ವಕ್ಕೂ ಮೂಲಾಧಾರವಾದ ಮುಖ್ಯವಿಚಾರವೇ ನಮ್ಮಲ್ಲಿ ಶೂನ್ಯವಾಗಿರುವುದು. ಅದನ್ನು ತಾವೂ ಬಲ್ಲಿರಷ್ಟೆ! ಇನ್ನು ಏನಾಗಬೇಕೆಂದು ಕೇಳಬೇಕಾದುದೇನು?

**ಕಾಕೋದರ**—(ಆತ್ಮ) ನನ್ನ ಮಾರ್ಗಕ್ಕೆ ಕ್ರಮವಾಗಿ ತಾನಾಗಿಯೇ ಬಂದನು. ಈಗ ನಾನು ಈ ಹಿಡಿತವನ್ನು, ಬಿಡಕೂಡದು. (ಪ್ರಕಾಶ) ದಾಸಮಹನೀಯರೇ! ತಿಳಿಯಿತು. ಸರ್ವಕ್ಕೂ ಮೂಲಾಧಾರವಾದುದು ಹಣವು, ಅದನ್ನು ಒದಗಿಸುವುದುತಾನೇ ಈಗ ಆಗಬೇಕಾದ ಕಾರ್ಯವು?

**ಕಬೀರ**—ನಿಜ! ಅದರಿಂದ ತಾನೇ ಸರ್ವ ಕಾರ್ಯಗಳೂ ಸಾಧಿಸಲ್ಪಡಬೇಕು!

**ಕಾಕೋದರ**—ಆದರೆ ತಮಗೆ ಈಗ ಎಷ್ಟು ಹಣವು ಬೇಕಾಗುವುದು?

**ಕಬೀರ**—ಪ್ರಯತ್ನವು ಪ್ರಬಲವಾದುದು. ಅದರಿಂದ ಮುನ್ನೂರು ವರಹಗಳಾದರೂ ಬೇಕಾಗುವುವು.

**ಕಾಕೋದರ**—ಮುನ್ನೂರು ವರಹಗಳೇ? ಬಹಳ ಹೆಚ್ಚಾದ ಹಣ. ಇಷ್ಟನ್ನು ಕೊಡತಕ್ಕವರು ಯಾರು! ಒಂದುವೇಳೆ ನಮ್ಮ ರತ್ನಾಕರನಿಗೆ ಹೇಳಿದರೆ ಕೊಟ್ಟಾನೇ! (ಚಿಂತಿಸಿ) ಇರಲಿ, ಚಿಂತೆಯಿಲ್ಲ; ತಮ್ಮ ಕಾರ್ಯವು ಅಮೋಘವಾದುದು. ತಾವು ಮಹನೀಯರು! ಹೇಗಾದರೂ ಆಗಲಿ; ತಾವು ದಯಮಾಡಿಸಿ ಆತನನ್ನು ಕೇಳಿ; ನಾನೂ ಮೊದಲೇ ಹೋಗಿ ತಮ್ಮ ಕಾರ್ಯವು ಅನುಕೂಲವಾಗುವಂತೆ ಸಾಧ್ಯವಾದಮಟ್ಟಿಗೆ ಆತನಿಗೆ ಹೇಳಿರುವೆನು

**ಕಬೀರ**—ತಾವು ದಯವಿಟ್ಟು ನನ್ನ ಪರವಾಗಿ ಸ್ವಲ್ಪ ಆ ಶ್ರೀಮಂತರಲ್ಲಿ ಮಾತನಾಡಿ ನನ್ನ ಕಾರ್ಯವನ್ನು ಅನುಕೂಲಮಾಡಿಸಿ ಕೊಡಬೇಕು.

**ಕಾಕೋದರ**—ಆಗಲಿ ಸ್ವಾಮಿ, ತಾವು ಇಷ್ಟುದೂರ ಹೋಗಬೇಕಾದುದೇ ಇಲ್ಲ. ನಾನು ಆತನೊಡನೆ ತಮ್ಮ ವಿಚಾರವಾಗಿ ನಿಜವಾಗಿಯೂ ಮಾತನಾಡಿ ಆತನಿಂದ ಸಹಾಯಮಾಡಿಸುವೆನು ಮೊದಲು ನಾನು ಹೋಗುವೆನು; ತಾವು ಅನಂತರ ದಯಮಾಡಿಸಿ.

**ಕಬೀರ**—ಬಹಳ ಸಂತೋಷ. ಹಾಗೆಯೇ ಆಗಲಿ.

(ಕಾಕೋದರನು ಹೋಗುವನು)

ದೃಶ್ಯ ೩ (ವೀಧಿಯಲ್ಲಿ ಕಬೀರನು ರತ್ನಾಕರನ ಮನೆಗೆ ಹೋಗುತ್ತಿರುವನು.)

**ಕಬೀರ**—ಆಹಾ.

ಕಂ॥ ಪಣ ಮುಳ್ಳವನೆ ಕುಲೀನಂ ।
ಗುಣವಂತಂ ಪಂಡಿತಂ ರಸಜ್ಞಂ ಸ್ತುತ್ಯಂ ॥
ಗಣನೀಯಂ ನರರೊಳಗೆನೆ ।
ಪಣಮಿಲ್ಲದ ನರನೆ ಜಗದೆ ಪೆಣವೆಂದೆನಿಪಂ ॥೩೭॥

ಹಣವೇ ! ಅಘಟನಾಘಟನೆಯ ಸಾಮರ್ಥ್ಯವುಳ್ಳ ನಿನ್ನ ಮಹಿಮೆಯು ಅದ್ಭುತವಾದುದು ! ನೀನು ಒಲಿದ ಮಾತ್ರದಿಂದ ಆ ಮನುಷ್ಯನಲ್ಲಿರುವ ದುರ್ಗುಣಗಳೆಲ್ಲವೂ ಮರೆಯಾಗಿ ಅವನು ಸಕಲ ವಿಷಗಳಲ್ಲಿಯೂ ಗುಣಶಾಲಿಯು, ಶ್ರೇಷ್ಠನು, ಎಂದು ಜನರಿಂದ ಕೊಂಡಾಡಲ್ಪಡುವನು. ಈ ಲೋಕವ್ಯವಹಾರದಲ್ಲಿ ನಿನ್ನಿಂದ ಸಾಧ್ಯವಾಗದ ಕಾರ್ಯವೇಯಿಲ್ಲ. ಇದರಿಂದಲ್ಲವೇ, ಗುಣವಿದ್ದರೂ ಹಣವಿಲ್ಲದಿದ್ದರೆ ಹೆಣದಂತೆ ನರನು ಜನರಿಂದ ದೂರಮಾಡಲ್ಪಡುವನು ! ಜಗನ್ನಾಟಕ ಸೂತ್ರಧಾರಿಯೆಂದು ಶ್ರೀರಾಮಚಂದ್ರನನ್ನು ಜ್ಞಾನಿಗಳು ಹೊಗಳುತ್ತಿದ್ದರೂ ನರನ ಈ ಲೋಕದ ಸುಖದುಃಖ ಸೂತ್ರಗಳು ನಿನ್ನ ಕೈಯಲ್ಲಿರುವಂತೆಯೇ ಕಾಣುವುದು. ನೀನಿಲ್ಲದಿದ್ದರೆ ಈ ಲೋಕವ್ಯವಹಾರದಲ್ಲಿ ಜನರಿಗೆ ಪಥವೇ ನಡೆಯಲಾರದು ! ಆಹಾ ! ಶ್ರೀರಾಮಚಂದ್ರಾ ! ನಿನ್ನ ಸೇವೆಗಾಗಿ ನಾನೂ ಸಹ ಹಣವನ್ನಪೇಕ್ಷಿಸಿ ಗುಣ ವಿವೇಚನೆ ಮಾಡದೆ ಧನಿಕನಲ್ಲಿ ದೈನ್ಯವನ್ನು ತೋರಬೇಕಾದ ಸಂಧಿಯನ್ನು ತಂದೆಯಾ ! ಆಗಲಿ !

ನಿನ್ನ ಚಿತ್ತವು ಯಾವರೀತಿ ಇರುವುದೋ ಆದರಂತೆ ನಮ್ಮನ್ನು ಆಡಿಸಿ, ಕುಣಿಸು, ನಿನ್ನ ಕೈಯೊಳಗಿನ ಸೂತ್ರದ ಬೊಂಬೆಗಳಂತಿರುವ ನಾವು ಏನನ್ನು ತಾನೇ ಮಾಡಬಲ್ಲೆವು. ಇವೆಲ್ಲವೂ ನಿನ್ನ ಲೀಲೆಯೇ! ಆಗಲಿ, ಈಗಲೇ ಧನಕ್ಕಾಗಿ ಶ್ರೀಮಂತನ ಮನೆಗೆ ಹೋಗುವೆನು. (ಹೋಗುವನು)

## ದೃಶ್ಯ ೪ (ರತ್ನಾಕರನ ಮನೆ.)

**ರತ್ನಾಕರ—**

೩೫ ಕಂ|| ಚೇತೋಜನ ಶರವಿದ್ಯಾ |
ಚಾತುರ್ಯಮದೆನಿತೊ! ಮೃದುಳತರ ಸುಮಶರದಿಂ ||
ಘಾತಿಸಿ ಭೇದಿಸಿದಂ ಗಡ! |
ಕಾತರ ಲೋಚನೆಯೊಳೂರಿದೆನ್ನಯ ಮನಮಂ ||೪೮||

ಕಾಕೋದರನು ಆ ಸುಂದರಿಯನ್ನು ನನ್ನ ವಶಪಡಿಸಲು ನಾನಾ ಪ್ರಯತ್ನಗಳನ್ನು ಮಾಡಿರುವೆನೆಂದು ನನ್ನೊಡನೆ ಆಗಾಗ ಬಂದು ಹೇಳುತ್ತಿರುವನು, ಆದರೂ ಈವರೆಗೂ ಫಲಿತಾಂಶವೇನೂ ಕಾಣಲಿಲ್ಲ

**ಕಾಕೋದರ—**(ಬಂದು ನಿಂತು ಎಲ್ಲವನ್ನೂ ಕೇಳುತ್ತಿರುವನು)

**ರತ್ನಾಕರ—**ಈ ಪ್ರಯತ್ನವು ಎಂದಿಗೆ ಫಲಿಸಬೇಕು! ನನ್ನ ಮನೋರಥವೆಂದಿಗೆ ನೆರವೇರಬೇಕು! ನಾನೆಂದಿಗೆ ಆ ಸುಂದರಿಯೊಡನೆ ಆನಂದದಿಂದ ಬಾಳಬೇಕು! ಆತನ ಮಾತನ್ನು ಕೇಳಿ ಆ ಸುಂದರಿಯ ಸ್ಮರಣೆಯನ್ನೇ ನಿದ್ರಾಹಾರಗಳನ್ನಾಗಿ ಮಾಡಿ ಕೊಂಡಿರುವೆನಲ್ಲಾ! ಇದಕ್ಕೆ ಪರ್ಯವಸಾನವೆಂದಿಗೆ?

**ಕಾಕೋದರ—**ಮಿತ್ರಾ! ಅತಿಶಯವಾದ ವಿರಹಾವಸ್ಥೆಯಿಂದ ಇರುವ ನಿನಗೆ ಲೋಕವ್ಯಾಪಾರಗಳೇ ತಿಳಿದಿಲ್ಲ, ನಾನೇನುಮಾಡಲಿ! ನನ್ನ ಪ್ರಯತ್ನವು ಹೇಗ ಫಲಕ್ಕೆ ಬಂದಿರುವುದೆಂಬುದನ್ನು ನೀನು ಗಮನಿಸಿದಂತೆಯೇ ಇಲ್ಲ.

**ರತ್ನಾಕರ—**ಏನು! ಏನು? ನಮ್ಮ ಪ್ರಯತ್ನವು ಫಲಕ್ಕೆ ಬಂದಿರುವುದೇ! ಅದು ಹೇಗೆ?

**ಕಾಕೋದರ**—ನೋಡು, ನನ್ನ ಪುತ್ರಗಳಂತೆ ನೂರಾರುಮಂದಿ ಸಾಧುಗಳು ರಾಮೋತ್ಸವಕ್ಕೆಂದು ಕಬೀರದಾಸನ ಮನೆಗೆ ಬಂದಿರುವರು. ಆದ ರಿಂದ ಆತನು ಉತ್ಸವವನ್ನು ನಡೆಯಿಸಬೇಕೆಂಬ ಕುತೂಹಲದಿಂದ ಮುನ್ನೂರು ವರಹಗಳನ್ನು ಒದಗಿಸಬೇಕೆಂದಾಲೋಚಿಸುತ್ತಿರುವ ಸಮ ಯಕ್ಕೆ ಸರಿಯಾಗಿ ನಾನು ಆತನ ಬಳಿಗೆ ಹೋಗಿ ಸಾಧ್ಯವಾದಮಟ್ಟಿಗೆ ನಿನ್ನಿಂದ ಸಹಾಯಮಾಡಿಸುವೆನೆಂದು ಹೇಳಿ ಬಂದಿರುವೆನು. ಆದರಿಂದ ಆತನು ಈಗ ನಿನ್ನಲ್ಲಿಗೆ ಬರುವನು. ನೀನು ಮಾತ್ರ ನಾನು ಹೇಳಿ ದಂತೆ ಸಹಾಯಮಾಡುವುದಾಗಿ ಒಪ್ಪುವುದಲ್ಲದೆ, ಒತ್ತೆಗಾಗಲಿ ಕ್ರಯ ಕ್ಕಾಗಲಿ ಯಾವ ಪದಾರ್ಥಗಳನ್ನಾದರೂ ಕೊಡಬೇಕೆಂದು ಕೇಳು, ಮುಂದಿನ ಕಾರ್ಯವನ್ನು ನಾನು ನೋಡಿಕೊಳ್ಳುವೆನು.

**ರತ್ನಾಕರ**—ಬಹಳ ಸಂತೋಷ! ಕಾಕೋದರಾ! ನೀನು ಮಹಾಚತುರನು- ಆಗಲೇ ಎಷ್ಟು ಅನುಕೂಲವಾದ ತಂತ್ರಗಳನ್ನು ಮಾಡಿರುವೆ!

**ಕಬೀರ**—(ಪ್ರವೇಶಿಸಿ) ಶ್ರೀಮಂತರಿಗೆ ನಮಸ್ಕಾರ.

**ರತ್ನಾಕರ**—ಓಹೋ! ದಾಸರವರೇ! ದಯಮಾಡಿಸಬೇಕು. ಅಪೂರ್ವ ವಾಗಿ ದಯಮಾಡಿಸಿದಿರಲ್ಲವೇ? ಈ ಪೀಠದಲ್ಲಿ ಕುಳಿತುಕೊಳ್ಳಿ, ಏನು ವಿಶೇಷವಿಚಾರ?

**ಕಬೀರ**—ಬಹಳ ಸಂತೋಷ. (ದೈನ್ಯದಿಂದ) ಆಕಸ್ಮಿಕವಾಗಿ ರಾಮನವರಾ ತ್ರಿಯ ಮಹೋತ್ಸವದ ಕಾರ್ಯವು ಒದಗಿರುವುದು. ಆದರಿಂದ ತಮ್ಮ ಸಹಾಯವನ್ನಪೇಕ್ಷಿಸಿ ಬಂದೆನು.

**ರತ್ನಾಕರ**—ಓಹೋ! ಮಹನೀಯರೇ! ತಮ್ಮ ರಾಮೋತ್ಸವಕ್ಕೆ ನನ್ನಿಂದ ಸಹಾಯವಾಗುವುದಾದರೆ ನಾನು ಧನ್ಯನಾದೆನು. ಅಲ್ಲದೆ ನಮ್ಮ ಸೇವಕನ ಸಹಾಯವು ಅವಶ್ಯಕವಾದರೆ ಅವನನ್ನು ಕಳುಹಿಸಿ ಕೊಡು ವೆನಲ್ಲದೆ ನಾನೂ ಕಾಕೋದರನೂ ಸಹ ಬಂದು ನಮ್ಮಿಂದಾಗತಕ್ಕ ಕಾರ್ಯಗಳನ್ನೂ ಮಾಡುವೆವು. ಇನ್ನು ನನ್ನಿಂದಾಗಬೇಕಾದುದೇನು?

**ಕಬೀರ**—ಆ ಸಹಾಯವು ತಮ್ಮಿಂದಾಗಬೇಕಾದುದಲ್ಲದೆ ಸರ್ವಕ್ಕೂ ಮೂಲಾ ಧಾರವಾದ ಧನಸಹಾಯವೂ ತಮ್ಮಿಂದಲೇ ಆಗಬೇಕೆಂದಪೇಕ್ಷಿಸಿ ಬಂದಿ

ರುವೆನು. ಹೇಗಾದರೂ ತಾವು ಸನ್ನಿಷ್ಟವನ್ನು ನಡೆಯಿಸಿಕೊಟ್ಟು ಪುಣ್ಯಭಾಗಿಗಳಾಗಬೇಕು.

**ರತ್ನಾಕರ**—ಅದು ತಾನೇ ಸ್ವಲ್ಪ ಆಲೋಚಿಸತಕ್ಕ ವಿಷಯ. ನಿನ್ನೆಯದಿನ ತಾನೇ ಹದಿನೈದು ಸಹಸ್ರ ವರಹಗಳನ್ನು ವ್ಯಾಪಾರಕ್ಕಾಗಿ ವಿದೇಶಕ್ಕೆ ಕಳುಹಿಸಿದೆನು ; ಈಗ ಸಮೀಪದಲ್ಲಿ ಹಣವು ಯಾವುದೂ ಇಲ್ಲ.

**ಕಾಕೋದರ**—ಮಿತ್ರಾ ! ರತ್ನಾಕರ ! ಪ್ರಯತ್ನವು ಪ್ರಬಲವಾದುದು. ಸಾಧುಗಳು ಎಂದೂ ನಿನ್ನಲ್ಲಿ ಬಂದು ಕೇಳಿದವರಲ್ಲ. ಅವರು ಬಹು ಸಂಕುಚಿತ ಮಾನಸರಾಗಿ ಬಂದು ದೇವತಾಕಾರ್ಯಕ್ಕಾಗಿ ಕೇಳಿದರೆ, ಇಲ್ಲವೆಂಬ ಮಾತು ನಿನ್ನಂಥವರಿಂದ ಹೊರಡತಕ್ಕುದು ಉಚಿತವಲ್ಲ ; ಹೇಗಾದರೂ ಪ್ರಯತ್ನಿಸಿ ಮತ್ತೆಲ್ಲಿಂದಲಾದರೂ ತರಿಸಿಯಾದರೂ ದಾಸಮಹನೀಯರಿಗೆ ಕೊಟ್ಟು ಕಾರ್ಯವನ್ನಾಗಮಾಡಿಸುವುದು ನಿನ್ನಂತಹ ಶ್ರೀಮಂತನಿಗೆ ಶ್ರೇಯಸ್ಕರವು.

**ಕಬೀರ**—(ಆತ್ಮಗತ) ಆಹಾ ! ಶ್ರೀರಾಮಾ ! ಈತನು ಎಂತಹ ಗುಣಶಾಲಿಯು !!

**ರತ್ನಾಕರ**—ಮಿತ್ರಾ ! ಕಾಕೋದರಾ ! ಹಣದ ಸುಖದುಃಖಗಳನ್ನು ನಾನೇ ಬಲ್ಲೆನು. ಬಾಯಿಂದ ಮಾತನಾಡುವ ನೀನು ಆ ಕಥೆಯನ್ನೇನು ಬಲ್ಲೆ ? ಆದರೆ ನೀನು ಹೇಳುವುದೂ ನಿಜ. ಮಹನೀಯರೇ ! ಈಗ ತಮಗೆ ಎಷ್ಟು ಹಣವು ಬೇಕಾಗುವುದು ?

**ಕಬೀರ**—ಹತ್ತು ದಿನಗಳವರೆಗೆ ನೂರಾರು ಜನರು ಸೇರಿ ನಡೆಯಿಸತಕ್ಕ ಉತ್ಸವವಾದುದರಿಂದ ಮುನ್ನೂರು ವರಹಗಳಾದರೂ ಬೇಕು

**ರತ್ನಾಕರ**-ಓಹೋ ! ಬಹಳ ದೊಡ್ಡ ಮೊತ್ತವು (ಆಲೋಚಿಸಿ) ಒಳ್ಳೆಯದು ! ಎಲ್ಲಿಯಾದರೂ ತರಿಸಿಯಾದರೂ ಕೊಡಬಹುದು. ಆದರೆ ಒತ್ತೆಗಾಗಲಿ ವಿಕ್ರಯಕ್ಕಾಗಲಿ ಏನಾದರೂ ಒಡವೆ ವಸ್ತುಗಳನ್ನು ಕೊಟ್ಟಲ್ಲದೆ ಅಷ್ಟು ಹಣವು ಯಾರಲ್ಲಿಯೂ ಸಿಕ್ಕಲಾರದೆಂಬುದನ್ನು ಹೇಳಲು ನನಗೆ ಸಂಕೋಚವಾಗುತ್ತಿರುವುದು.

**ಕಬೀರ**—(ಆತ್ಮ) ಈಗ ಇದಕ್ಕೆ ಯಾವ ಪ್ರತ್ಯುತ್ತರವನ್ನು ಹೇಳಲಿ ! ಅಯ್ಯೋ ! ನನ್ನ ದೌರ್ಭಾಗ್ಯವೇ ! (ಚಿಂತಿಸಿ) ಇರಲಿ. ಹೀಗೆ ಮಾಡುವೆನು. (ಪ್ರಕಾಶಂ) ಸ್ವಾಮೀ ! ವಸ್ತು ವಾಹನಗಳೂ ಭೂಷಣಗಳೂ

ಯಾವುದನ್ನೂ ಕಾಣಲೇಕಾಣದ ಬಡವನು ನಾನೆಂಬುದು ತಮಗೆ ಗೋಚರವೇ ಇದೆ, ಆದುದರಿಂದ ನನ್ನಲ್ಲಿರುವ ಅನೂಲ್ಯವಾದ ಶ್ರೀ ರಾಮನಾಮವನ್ನು ತಮ್ಮಲ್ಲಿ ಒತ್ತೆಯಾಗಿಡುವೆನು.

**ರತ್ನಾ**ಕರ—ಕಾಕೋದರಾ! ಕೇಳಿದೆಯಾ? ರಾಮನಾಮವನ್ನೊತ್ತೆಯಿಡು ವರಂತೆ! ಇಂತಹ ಲೋಕವ್ಯವಹಾರವೇ ತಿಳಿಯದ ಪ್ರಾಣ್ಯಾತ್ಮನಿಗೆ ನೂರಾರು ವರಹಗಳನ್ನು ಸಾಲಕೊಡಬೇಕಂತೆ! ಅಯ್ಯೋ ಗ್ರಹಚಾರವೇ! (ನಗುವನು.)

**ಕಾಕೋದರ**—ಸ್ವಾಮಿಾ! ದಾಸರೇ! ನಿಮ್ಮ ರಾಮನಾಮವು ನಮ್ಮ ಶ್ರೀಮಂತರಿಗೇತಕ್ಕೆ? ಅದೇನು ತೂಕವಾಗುವುದೇ ಬಣ್ಣ ಬರುವುದೇ? ಒಡವೆಯಾಗುವುದೇ? ಪೆಟ್ಟಿಗೆಯಲ್ಲಿ ತುಂಬಿಟ್ಟುಕೊಳ್ಳುವುದೇ? ಅಯ್ಯೋ! ಇಷ್ಟು ಆಲೋಚಿಸದೆ ಹೇಳುತ್ತಿರಲ್ಲಾ! ಏನು ಹೇಳೋಣ ಸ್ವಾಮಿಾ!

ರತ್ನಾಕರ—ಸ್ವಾಮಿಾ! ದಾಸರೇ! ನಿಮ್ಮ ರಾಮನಾಮದಿಂದ **ನಮಗೆ** ಪ್ರಯೋಜನವಿಲ್ಲ ನಮಗೆ ಅದು ಬೇಡ ಮತ್ತೇನಾದರೂ **ಇದ್ದರೆ** ಹೇಳಿ.

**ಕಬೀರ**—(ಆತ್ಮಗತ) ಆಹಾ! ಶ್ರೀರಾಮಾ! ಸೀತಾರಾಮಾ! ನೀನೆಂತಹ ದಯಾಪರನು! ಅಜ್ಞತೆಯಿಂದ ನಾನು ನಿನ್ನ ನಾಮವನ್ನು ಒತ್ತೆ ಇಡುವೆನೆಂದು ಹೇಳಿದ್ದೆನಲ್ಲಾ! ಒಂದುವೇಳೆ ಆತನು ಅದಕ್ಕೆ ಒಪ್ಪಿದ್ದಲ್ಲಿ ನಾನು ಈ ಮಹೋತ್ಸವದಲ್ಲಿ ನಿನ್ನ ನಾಮವನ್ನುಚ್ಚರಿಸದೆ ಪತಿತನಾಗುತ್ತಿದ್ದೆನಲ್ಲಾ! ಶ್ರೀರಾಮಾ ನನ್ನಲ್ಲಿ ದಯವಿಟ್ಟು ನೀನು ಶ್ರೀಮಂತನ ಮನದಲ್ಲಿ ಹೊಕ್ಕು ರಾಮನಾಮವು ಬೇಡವೆಂದು ಹೇಳಿಸಿದೆಯಲ್ಲಾ! ನಿನಗೆ ನನ್ನಲ್ಲಿ ಎಷ್ಟು ಪ್ರೀತಿ ಯಿರುವುದೋ ರಾಮಾ! ಆಗಲಿ, ಇರುವ ಸಂಗತಿಯನ್ನು ಶ್ರೀಮಂತನಿಗೆ ತಿಳಿಸುವೆನು (ಪ್ರಕಾಶ) ಶ್ರೀಮಂತರೇ! ನಮ್ಮ ಮನೆಯಲ್ಲಿ ನಾನೂ ನನ್ನ ಪತ್ನಿಯೂ ನನ್ನ ಮಗ ಕಮಾಲನೂ ಈ ಮೂರು ಮಂದಿ ಇರುವೆವು ಈ ಮೂವರಲ್ಲಿ ತಾವು ನನ್ನನ್ನು ಒತ್ತೆಯಾಗಿ ಅಪೇಕ್ಷಿಸಿದಲ್ಲಿ ಉತ್ಸವವನ್ನು ನಡೆಯಿಸ ತಕ್ಕ ಕರ್ತನೇ ಇಲ್ಲದೆ ಉತ್ಸವ ಭಂಗವಾಗುವುದು. ಇನ್ನು ನನ್ನ

ಸತಿಸುತರಿರುವರು, ಅವರಲ್ಲಿ ನನ್ನ ಪುತ್ರನನ್ನು ಬೇಕಾದರೆ ಒತ್ತೆಯಿಡುವೆನು.

ಕಾಕೋದರ—ಮಿತ್ರಾ! ಏನು? ಅದಕ್ಕಾದರೂ ಒಪ್ಪಲೇಬೇಕು! ಏತಕ್ಕೆಂದರೆ, ಒಪ್ಪದಿದ್ದರೆ ಮಹತ್ಕಾರ್ಯವು ಕೆಡುವುದು ನಾವು ಅವರಿಗೆ ಆಪ್ತರಾಗಿ ಈ ಕಾಲದಲ್ಲಿ ಸಹಾಯಮಾಡದೆ ಇರುವುದು ಉಚಿತವಲ್ಲ. (ಒಪ್ಪಬೇಡವೆಂದು ಸನ್ನೆ ಮಾಡುವನು)

ರತ್ನಾಕರ—ಕಾಕೋದರಾ! ಸರಿ! ನೀನೇನೋ ಹೇಳುವೆ; ಆದರೆ ಬಾಲಕನು ಆ ಮೌಲ್ಯಕ್ಕೆ ತಕ್ಕವನೇ? ಅಥವಾ ನಾವು ಪರರ ಚಿಕ್ಕಮಕ್ಕಳನ್ನು ಸ್ವಾಧೀನ ಮಾಡಿಕೊಳ್ಳಬಹುದೇ?

ಕಾಕೋದರ—ಆ ವಿಚಾರವನ್ನು ಕೇಳೋಣ ಸ್ವಾಮಿ! ದಾಸರೇ! ಪಾಪ! ಏನೂ ಅರಿಯದ ಆ ಚಿಕ್ಕ ಹುಡುಗನನ್ನು ನಾವು ತಮ್ಮಿಂದ ಒತ್ತೆಗಾಗಿ ತೆಗದುಕೊಳ್ಳಬಹುದೇ? ಪಾಪ! ಬೇಡಿ ಸ್ವಾಮಿ! ಪರರ ಮಕ್ಕಳನ್ನು ಸೇವಾವೃತ್ತಿಗಾಗಿ ಇಟ್ಟುಕೊಂಡು ಕೆಲಸ ಮಾಡಿಸಲು ನಮಗೆ ಮನಸ್ಸು ಒಪ್ಪುವುದಿಲ್ಲ ಪಾಪ! ಬೇಡಿ! ಬೇಡಿ! ಅಲ್ಲದೆ ಆ ಮಗುವು ಮುನ್ನೂರು ವರಹಗಳ ಒತ್ತೆಗೆ ತಕ್ಕವನೂ ಅಲ್ಲ! ಬೇಡಿ! ಬೇಡಿ!!

ಕಬೀರ—ಹಾಗಾದರೆ ನನ್ನ ಪತ್ನಿಯನ್ನೇ ತಾವು ಒತ್ತೆಗಾಗಿ ತೆಗೆದುಕೊಳ್ಳಬಹುದು

ಕಾಕೋದರ—(ರತ್ನಾಕರನ ಕಡೆಗೆ ಒಪ್ಪಿಕೊಳ್ಳೆಂದು ಕಣ್ಣುಸನ್ನೆ ಮಾಡುತ್ತ ಕಬೀರನನ್ನು ನೋಡಿ) ಅಯ್ಯೋ! ಸ್ವಾಮಿ! ಪಾಪ! ತಾವು ಈರೀತಿ ಹೇಳಿದರೆ ಹೇಗೆ? ತಮ್ಮ ಬೀಬಿಯವರನ್ನು ಒತ್ತೆಗೆ ತೆಗೆದುಕೊಳ್ಳುವುದು ಲೋಕವಿರೋಧವಲ್ಲವೆ? (ರತ್ನಾಕರನನ್ನು ನೋಡಿ) ರತ್ನಾಕರಾ! ನೋಡು. ಪಾಪ! ದಾಸರು ಪತ್ನಿಯನ್ನೇ ಒತ್ತೆಗಾಗಿ ಇಡುವರಂತೆ! ಇದು ಬಹುವ್ಯಸನಕರವಾದ ವಿಚಾರ ಇದನ್ನು ನಾವು ಹೇಗೆ ಒಪ್ಪುವುದು?

ಕಬೀರ—ಶ್ರೀಮಂತರೇ! ಆಕೆಯನ್ನು ಬಿಟ್ಟರೆ ಈ ಸಮಯಕ್ಕೆ ನಾನು ತಮ್ಮಲ್ಲಿ ಒತ್ತೆಗಾಗಿ ಇಡಲು ಮತ್ತೆ ಯಾವ ವಸ್ತುವೂ ಇಲ್ಲ. ಆದ

ಕಾರಣ ದಯವಿಟ್ಟು ಪ್ರತಿಹೇಳದೆ ತಾವು ಆಕೆಯನ್ನು ಒತ್ತೆಯಾಗಿಟ್ಟು ಕೊಳ್ಳಲು ಒಪ್ಪಬೇಕು.

**ರತ್ನಾಕರ**—ಸ್ವಾಮಿಾ! ದಾಸರೇ! ಇದು ಬಹು ಸೂಕ್ಷ್ಮವಿಚಾರ! ಈಗ ನಾವು ಇದಕ್ಕೆ ಒಪ್ಪದಿದ್ದರೆ ತಮ್ಮ ಕಾರ್ಯಕ್ಕೆ ವಿಘಾತವುಂಟಾಗುವುದು. ಒಪ್ಪುವುದಕ್ಕೆ ನಮಗೆ ಮನಸ್ಸಿಲ್ಲ! ಒಳ್ಳೆಯ ಧರ್ಮಸಂಕಟವುಂಟಾಯಿತೇ! ಏನು ಮಾಡುವುದು?

**ಕಾಕೋದರ**—ಮಿತ್ರಾ! ಈ ಕಾಲದಲ್ಲಿ ನಾವು ಯಾವ ಆಲೋಚನೆಯನ್ನೂ ಮಾಡಬಾರದು ಮುಖ್ಯವಾಗಿ ದಾಸರ ಕಾರ್ಯವು ನಿರ್ವಿಘ್ನವಾಗಿ ನೆರವೇರುವುದಕ್ಕೆ ನಾವು ಸಹಾಯಮಾಡಲೇಬೇಕು ಇದರಿಂದ ನಿನಗೆ ಪುಣ್ಯ ಬರುವುದು ಆದುದಾಗಲಿ. ಈ ಕಾರ್ಯಕ್ಕೆ ನೀನು ಸಮ್ಮತಿಸಿ ಅವರಿಷ್ಟದಂತೆ ಆಕೆಯನ್ನು ಒತ್ತೆಯಾಗಿಟ್ಟುಕೊಂಡು ಮೊದಲು ಹಣವನ್ನು ಕೊಡು ಈ ಚರ್ಚೆಯಲ್ಲಿ ಕಾಲಹರಣ ಮಾಡಿದರೆ ಕಾರ್ಯವು ಕೆಡುವುದು. ಪಾಪ!

**ರತ್ನಾಕರ**—ನಿಜ! ಈಗ ಒಪ್ಪದಿದ್ದರೆ ನಿಧಿಯಿಲ್ಲ. ದಾಸರೇ! ಇನ್ನು ಯತ್ನವೇನು? ತಮ್ಮ ಇಷ್ಟದಂತೆಯೇ ಆಗಲಿ, ಆಕೆಯನ್ನು ಕರೆಯಿಸಿ. ಹಣವನ್ನು ತರಿಸಿಕೊಡುವೆನು

**ಕಬೀರ**—(ಸಂತೋಷದಿಂದ) ಈಗ ನನಗೆ ಸಂತೋಷವಾಯಿತು (ಮುಂದೆ ಹೋಗಿ ಹಿಂದಿರುಗಿ) ಸ್ವಾಮಿಾ! ಆಕೆಯು ಬಹಳ ಬಡತನದಲ್ಲಿ ಬೆಳೆದವಳು, ಅಲ್ಲದೆ ನಾಗರಿಕ ರೀತಿಯನ್ನು ಕಾಣಳು. ಚಾತುರ್ಯವನ್ನು ತಿಳಿಯಳು. ಅದರಿಂದ ತಾವು ಆಕೆ ಬಂದನಂತರ ನಿರಾಕರಿಸದೆ ಪರಿಗ್ರಹಿಸಿ ವಾಗ್ದಾನವನ್ನು ನೆರವೇರಿಸಲೇ ಬೇಕಾಗಿ ಬೇಡಿಕೊಳ್ಳುವೆನು.

**ರತ್ನಾಕರ**— ದಾಸರೇ! ನಮ್ಮಂತಹ ವ್ಯಾಪಾರಿಗಳಿಗೆ ನಾಲಿಗೆಯೇ ಮುಖ್ಯ: ನಾನು ಮೊದಲೇ ಹೇಳಿಬಿಟ್ಟಿರುವೆನಾದುದರಿಂದ ಆಕೆ ಹೇಗಾದರೂ ಇರಲಿ. ನಿರಾಕರಿಸುವುದಿಲ್ಲ. ಕರೆತನ್ನಿ.

**ಕಬೀರ**—ಸಂತೋಷ.

ಕಾಕೋದರ—ರತ್ನಾಕರ! ಆಕೆ ಮಹನೀಯರ ಪತ್ನಿಯು, ನಿನ್ನ ಮನೆಗೆ ಲಕ್ಷ್ಮಿಯಂತೆ ಬರುವಳು, ಆದಕಾರಣ ನಿನ್ನ ಮನೆಯಿಂದ ಉತ್ತಮವಾದ ವಸ್ತ್ರಭೂಷಣಗಳನ್ನು ಕೊಟ್ಟು ಕಳುಹಿಸು.

ರತ್ನಾಕರ—ಅದೂ ನಿಜವೇ! ಎಲವೋ! ಸೇವಕಾ! ನಾನು ಹೇಳಿದೆನೆಂದು ಹೆಂಗಸರಿಗೆ ತಿಳಿಸಿ ಒಳ್ಳೆಯ ವಸ್ತ್ರಾಭರಣಗಳನ್ನು ತೆಗೆದುಕೊಂಡು ಬಾ!

ಲಿಂಗ—ಅಪ್ಪಣೆ, (ಹೋಗುವನು.)

ರತ್ನಾಕರ—ಸ್ವಾಮಿ! ಸೇವಕನು ವಸ್ತ್ರಾಭರಣಗಳನ್ನು ತರುವನು. ಬೀಬಿಯವರು ಅವುಗಳನ್ನಲಂಕರಿಸಿಕೊಂಡು ಬರಲಿ.

ಕಬೀರ—ಆಗಬಹುದು. (ಹೋಗುವನು)

## ದೃಶ್ಯ ೪ (ಕಬೀರದಾಸನ ಮನೆ.)

ಕಬೀರ—(ಆತ್ಮ) ಪ್ರಿಯೆಯನ್ನು ಶ್ರೀಮಂತನಿಗೆ ಒತ್ತೆಯಿಡುವೆನೆಂಬ ಸಮಾಚಾರವನ್ನು ಆಕೆಗೆ ಹೇಗೆ ಹೇಳಲಿ! ಶ್ರೀರಾಮಾ! ಎಂತೆಂತಹ ಪರೀಕ್ಷೆಗಳಿಗೆ ನನ್ನನ್ನು ಸಿಕ್ಕಿಸುವೆ! (ಚಿಂತಿಸಿ) ಛೀ! ನಾನೇಕೆ ಚಿಂತಿಸಬೇಕು ಶ್ರೀರಾಮನ ಸಂಕಲ್ಪವಿದ್ದಂತೆ ನಡೆಯುವ ಕಾರ್ಯಕ್ಕೆ ನಾನು ಅವಿವೇಕದಿಂದ ಚಿಂತಿಸಬಹುದೇ! (ಪ್ರಕಾಶಂ) ಪ್ರಿಯೇ! ಪ್ರಿಯೇ!

ಬೀಬಿ—(ಪ್ರವೇಶಿಸಿ) ಮತ್ತೇನು? ಹಣದ ವಿಚಾರಕ್ಕಾಗಿ ಶ್ರೀಮಂತನ ಬಳಿಗೆ ಹೋಗಿದ್ದಿರಷ್ಟೆ? ಅದೇನಾಯಿತು?

ಕಬೀರ—ಆಗುವುದೇನು? ಅನುಕೂಲವೇ ಆಯಿತು

ಬೀಬಿ—ಬಹಳ ಸಂತೋಷ, ಬಹಳ ಸಂತೋಷ!

ಕಬೀರ—ಆದರೆ ಒಂದು ವಿಚಾರವಿರುವುದು; ನಾವು ಅದರಂತೆ ನಡೆದರೆ ಹಣವು ಸಿಕ್ಕುವುದು.

ಬೀಬಿ—ಧರ್ಮ ವಿರುದ್ಧವಲ್ಲದಿದ್ದಲ್ಲಿ ಶ್ರೀರಾಮ ಸೇವೆಗಾಗಿ ಯಾವ ಕಾರ್ಯವನ್ನು ತಾನೆ ಮಾಡಬಾರದು? ಮಾಡೋಣ!

ಕಬೀರ—ಅದಕ್ಕಾಗಿಯೇ ನಾನು ಒಪ್ಪಿ ಬಂದಿರುವೆನು.

ಬೀಬಿ—ಬಹಳ ಸಂತೋಷ. ಅದು ಯಾವ ಕಾರ್ಯವು ಹೇಳಬಾರದೇ?

**ಕಬೀರ**—ಏನೆಂದು ಹೇಳಲಿ ' ಮುನ್ನೂರುವರಹಗಳ ಮೌಲ್ಯಕ್ಕೆ ತಕ್ಕ ವಿಕ್ರಯ ವಸ್ತುವನ್ನಾಗಲಿ ಒತ್ತೆಯನ್ನಾಗಲಿ ಕೊಡಬೇಕೆಂದಾತನನ್ನು ಅಪೇಕ್ಷಿಸಿದನು.

**ಬೀಬಿ**—ಓಹೋ ! ಅದುತಾನೇ ನಮ್ಮಿಂದ ಸಾಧ್ಯವಲ್ಲದಿರುವುದು !

**ಕಮಾಲ**—ಅಪ್ಪಾ! ನನ್ನನ್ನು ಶ್ರೀಮಂತನಿಗೆ ಮಾರಿಬಿಟ್ಟು ನೀವು ರಾಮೋತ್ಸವವನ್ನು ನಡೆಯಿಸಿಬಿಡಿ ರಾಮನು ತೃಪ್ತನಾಗುವನು.

**ಕಬೀರ**—ಮಗೂ ! ಈಗ ಅಂತಹ ಸ್ಥಿತಿಯೇ ಬಂದಿರುವುದು. (ವ್ಯಸನಪಡುವನು )

**ಕಮಾಲ**—ಅಪ್ಪಾ! ಚಿಂತಿಸುವುದೇತಕ್ಕೆ ? ನಡೆ, ನಾನು ಬರುವೆನು. ಆದರೆ ನನಗೆ ಆತನು ಮುನ್ನೂರು ವರಹಗಳ ಮೌಲ್ಯವನ್ನು ಕೊಡುವನೇ ?

**ಕಬೀರ**—ಇಲ್ಲ. ಅದು ಸಾಧ್ಯವಲ್ಲದುದರಿಂದ ತಾನೇ ಇಷ್ಟು ಚಿಂತೆಯುಂಟಾಗಿರುವುದು ; ಆ ಸಾಧುಗಳು ಬಂದಿದ್ದರೆ ಅವರನ್ನು ಉಪಚರಿಸು ಹೋಗು. (ಕಳುಹಿಸುವನು.)

**ಬೀಬಿ**—ಆದರೆ ಹಣವು ಅನುಕೂಲಿಸಿತೆಂದು ಹೇಳಿದಿರಲ್ಲವೇ ? ಅದು ಹೇಗೆ ಅನುಕೂಲವಾಯಿತು ?

**ಕಬೀರ**—ಪ್ರಿಯೇ ! ಏನೆಂದು ಹೇಳಲಿ ! ಬಾಲನನ್ನು ಆತನು ಒತ್ತೆಗಾಗಿ ತೆಗೆದುಕೊಳ್ಳಲು ಒಪ್ಪಲಿಲ್ಲ. ಉತ್ಸವ ಕರ್ತನೆಂದು ನಾನು ಒತ್ತೆಗೆ ನಿಲ್ಲಲಿಲ್ಲ. ಆದಕಾರಣ ನಿನ್ನನ್ನು ಆತನಲ್ಲಿ ಒತ್ತೆಯಿಡಲು ಒಪ್ಪಿದೆನು.

**ಬೀಬಿ**—(ಕಾತರ ವ್ಯಸನಗಳಿಂದ) ಅಯ್ಯೋ ! ಇನ್ನೇನು ಗತಿ ! ಪ್ರಿಯಾ ! ರಾಮಸೇವೆಯ ಉದ್ದೇಶವು ಶ್ಲಾಘ್ಯವಾದುದು. ಇದಕ್ಕಾಗಿ ತಾವು ಅರ್ಧಶರೀರವಾದ ಪತ್ನಿಯನ್ನು ಪರರಲ್ಲಿ ಒತ್ತೆಯಿಡ ಬಹುದೇ ?

ಕಬೀರ—

**೩೬ ಕಂ|| ಶ್ರೀಹರಿಯಂ ಜಾನಿಸುತುಂ |**
**ದೇಹದೊಳಭಿಮಾನ ಮುಳಿದ ನಮಗೀ ತೆರದಿಂ ||**
**ಮೋಹಾಂಧತೆಯುಚಿತಮೆ ಯಿ |**
**ನ್ನೈಹಿಕದಭಿಮಾನವೇಕೆ ? ತೊಲಗಿಸು ಸಾಧ್ವೀ ||೨೯||**

ಪ್ರಿಯೇ ! ಕಡೆಗೂ ಇನ್ನೂ ದೇಹಾಭಿಮಾನವೆಂಬುದು ನಿನಗೆ ತಪ್ಪ ಲಿಲ್ಲವೇ ? ಈ ದೇಹವು ಎಲ್ಲಿದ್ದರೇನು ? ಚಿತ್ತಶುದ್ಧಿಯಿಂದ ಪರಿಶುದ್ಧಾತ್ಮರಾಗಿರುವರಲ್ಲವೇ ದೈವಾನುಗ್ರಹ ಪಾತ್ರರು, ಪಾಪವಿಹೀನರು, ಪರಮಜ್ಞಾನಿಗಳು !! ಪತಿಯಾರು ? ಪತ್ನಿಯಾರು ? ಪುತ್ರನಾರು ? ಈ ದೇಹಗಳಿಗೆ ನಾವು ಹೆಸರುಗಳನ್ನಿಟ್ಟು ಭ್ರಾಂತಿಯಿಂದ ಕಲ್ಪಿಸಿ ಕೊಂಡಿರುವ ಸಂಬಂಧಗಳಿಂದ ಮೋಹಮುಗ್ಧರಾಗಿ ವೈರಾಗ್ಯವನ್ನು ಮರೆತು ದುಃಖಿಸಲಾಗುತ್ತಿರುವೆವು. ಇದನ್ನು ಹಿಂದೆಯೇ ನಾನು ಹೇಳಿದ್ದೆನಲ್ಲವೇ ? ಈಗಲೂ ನೀನು ಚೆನ್ನಾಗಿ ಆಲೋಚಿಸು ಕೊಡುವವನು ಯಾರು ? ತೊಳ್ಳುವವನು ಯಾರು ? ಈ ಲೀಲೆಯೆಲ್ಲವನ್ನೂ ಕಲ್ಪಿಸಿದವರು ಯಾರು ? ಅದರಲ್ಲಿನ ಫಲಾಫಲಗಳಿಗೆ ಹೊಣೆಯಾರು ? ಎಲ್ಲವೂ ಶ್ರೀರಾಮಚಂದ್ರನೇ ! ಅವುಗಳಿಂದ ನಮಗೆ ಪಾಪವೆಲ್ಲಿಯದು ? "ನಾನು, ನನ್ನದು" ಎಂಬ ಭ್ರಾಂತಿಯೊಂದಿದ್ದಲ್ಲಿ ನಮಗೆ ಪಾಪವುಂಟಾಗುವುದು, ಅದಿಲ್ಲದೆ ಸರ್ವ ಧರ್ಮಗಳನ್ನೂ ತೊರೆದರೂ ಆ ಪರಮಾತ್ಮನೊಬ್ಬನೇ ಸರ್ವ ಪ್ರೇರಕನೂ, ಸರ್ವಜ್ಞನೂ, ಸರ್ವಕರ್ತನೂ, ಸರ್ವಕಾರಣನೂ ಸರ್ವ ಫಲದಾಯಕನೂ, ಸರ್ವಾತ್ಮಕನೂ ಎಂದು ನಿಜವಾಗಿಯೂ ತಿಳಿದು ವರ್ತಿಸುವವನಿಗೆ ಯಾವ ಪಾಪವೂ ಇಲ್ಲ, ಯಾವ ದುಃಖವೂ ಇಲ್ಲ. ಆತನು ನಿತ್ಯಸುಖಿ, ಆತನೇ ಪರಮಾತ್ಮನಲ್ಲಿ ಐಕ್ಯನಾಗುವನು, ಈ ಮೂಲ ತತ್ತ್ವವನ್ನರಿತು ದೇಹಾಭಿಮಾನವನ್ನು ಬಿಟ್ಟು ಪರಮಾತ್ಮನು ಒದಗಿಸಿರುವ ಈ ಸಂಘಗೆ ಯಥೋಚಿತವಾಗಿ ನಡೆದು ಪುಣ್ಯಭಾಗಿನಿಯಾಗುವುದು ನಿನಗೆ ಧರ್ಮವು.

**ಬೀಬಿ**—ಪ್ರಿಯನೇ ! ಮಹನೀಯರೂ ಜ್ಞಾನಿಗಳೂ ಆದ ನಿಮ್ಮ ಉಪದೇಶದಿಂದ ನನ್ನ ಸಂಶಯ ನಿವಾರಣೆಯಾಗಿ ನಿರ್ಮಲ ಮನಸ್ಕಳಾದೆನು. ಆದರೆ ಲೋಕವ್ಯವಹಾರಕ್ಕೆ ನಾವು ತಕ್ಕಂತೆ ನಡೆಯಬೇಕಲ್ಲವೇ ಜನಗಳಿಂದ ನಮಗೆ ಅಪಕೀರ್ತಿ ಬರಬಾರದಲ್ಲವೇ ?

**ಕಬೀರ**—ಪ್ರಿಯೇ ! ಜಗದ್ವ್ಯಾಪಾರವೇ ಪ್ರಧಾನವೆಂದು ತಿಳಿದಿರಶಕ್ತರಿಗೆ ಆ ಭಯವೂ, ಭ್ರಾಂತಿಯೂ ಅಲ್ಲದೆ "ನಿಸ್ಪೃಹಸ್ಯ ತೃಣಂ ಜಗತ್" ಎಂಬಂತೆ ನಿಸ್ಪೃಹರಾಗಿ ಪಾರಲೌಕಿಕ ಸುಖವನ್ನೂ ಭಗವದನುಗ್ರಹ

ವನ್ನೂ ಮಾತ್ರವೇ ಅಪೇಕ್ಷಿಸಿ ವರ್ತಿಸಿ ಜನ್ಮವನ್ನು ಕಳೆಯಕೊಳ್ಳಲು ಭಕ್ತಿಮಾರ್ಗದಲ್ಲಿ ವರ್ತಿಸುವ ನಮಗೆ ಲೌಕಿಕವಾದ ಈ ಮೋಹವೇಕೆ ? ಈ ಭಯವೇಕೆ ? ಈ ಭ್ರಾಂತಿಯೇಕೆ ? ಆಲೋಚಿಸು.

**ಬೀಬಿ**—ನಿಜ, ನಿಜ ! ನನ್ನನ್ನು ಕ್ಷಮಿಸಿ, ರಾಮಸೇವೆ ನಡೆಯಲಿ. ತಮ ಇಷ್ಟಾನುಸಾರ ನಡೆಯುವೆನು.

**ಲಿಂಗ**—(ವಸ್ತ್ರಾಭರಣಗಳನ್ನು ತಂದುಕೊಡುವನು.)

**ಕಬೀರ**—ಇದೋ ! ಶ್ರೀಮಂತನು ವಸ್ತ್ರಾಭರಣಗಳನ್ನು ಕಳುಹಿಸಿರುವನು, ಇವುಗಳನ್ನು ಧರಿಸಿಕೋ.

**ಬೀಬಿ**—(ಬೇಸರದಿಂದ) ಅಯ್ಯೋ ! ಈ ವಸ್ತ್ರಾಭರಣಗಳು ನನಗೆ ಬೇಡ. ನಾನು ಧರಿಸಲಾರೆನು.

**ಕಬೀರ**—ಹಾಗಲ್ಲ; ನೀನು ಈ ಬಡತನದ ವಸ್ತ್ರಗಳಿಂದ ಹೋದರೆ ಶ್ರೀಮಂತರು ನಿನ್ನನ್ನು ನೋಡಿ ಅಸಹ್ಯಪಡುವರು. ಅದರಿಂದ ಒಂದುವೇಳೆ ಅವರು ನಿನ್ನನ್ನು ನಿರಾಕರಿಸಿದರೆ ನಮ್ಮ ರಾಮಕಾರ್ಯಕ್ಕೆ ಭಂಗ ಬರುವುದು. ಆದಕಾರಣ ಸಮ್ಮತಿಸಿ ಇವುಗಳನ್ನು ಧರಿಸಿಕೊಂಡು ಬಾ. ಹೋಗೋಣ.

**ಬೀಬಿ**—(ವ್ಯಸನದಿಂದ) ಆಗಬಹುದು. (ವಸ್ತ್ರಾಭರಣಗಳನ್ನು ತೆಗೆದುಕೊಂಡು ಒಳಗೆ ಹೋಗುವಳು)

**ಕಬೀರ**—(ಆತ್ಮ) ಆಹಾ ! ಶ್ರೀರಾಮಚಂದ್ರನು ಎಂತಹ ಸಂಧಿಯನ್ನು ಕಲ್ಪಿಸಿರುವನು ! ಲೋಕದಲ್ಲಿ ಪತ್ನಿಯನ್ನು ಪರಗೃಹದಾಸಿಯನ್ನಾಗಿ ಮಾಡುವುದಕ್ಕಿಂತಲೂ ವ್ಯಸನಕರವಾದ ಕಾರ್ಯವಾವುದಿರುವುದು ? ಅಯ್ಯೋ ! ಪರಮಾತ್ಮನೇ ! ನಿನ್ನ ಲೀಲೆಯು ವಿಚಿತ್ರವಾದುದು. (ಚಿಂತಿಸಿ) ಇದು ಆಹಾ ! ಉದಾರಿಗಳಲ್ಲದ ಶ್ರೀಮಂತರ ಹೃದಯವು ಎಷ್ಟು ಕಠೋರವಾಗಿರುವುದು ! ಶ್ರೀರಾಮಾ ! ಮಹಾನುಭಾವನಾದ ಸತ್ಯಹರಿಶ್ಚಂದ್ರನು ಮುನಿಯ ದಕ್ಷಿಣಾ ಧನಕ್ಕಾಗಿ ಪತ್ನೀಪುತ್ರರನ್ನು ಪರರಿಗೆ ಮಾರಿದ್ದನು. ಆದು ದೋಷವಾಗಲಿಲ್ಲ. ಈಗಲೂ ನಾನು ನಿನ್ನ ಸೇವೆಗಾಗಿ ಪತ್ನಿಯನ್ನು ಶ್ರೀಮಂತನಲ್ಲಿ ಒತ್ತೆಯಿಡುವೆನು. ಇದರಿಂದ ಈ ಕಾರ್ಯದಲ್ಲಿಯ ಧರ್ಮಾಧರ್ಮಗಳು ನಿನಗೆ ಸೇರಿದುವು. ಪರಮಾತ್ಮಾ ! ನನ್ನ ಸರ್ವಾಪರಾಧಗಳನ್ನೂ ಮನ್ನಿಸಿ ನಿನ್ನ ಸೇವೆ

ಯನ್ನು ಮಾಡಲು ನನಗನುಕೂಲತೆಯನ್ನೊದಗಿಸು. (ಮೇಲೆ ನೋಡಿ) ಓಹೋ ! ಈಗಲಾದರೋ ಮಳೆಯು ಬಹಳವಾಗಿ ಸುರಿದು ನೆಲವೆಲ್ಲವೂ ಕೆಸರಾಗಿರುವುದು ಈಗ ದಿವ್ಯವಸ್ತ್ರಾಭರಣಗಳನ್ನು ಧರಿಸಿರುವ ಈಕೆಯನ್ನು ನಾನು ಈ ಕೆಸರಿನಲ್ಲಿ ನಡೆಯಿಸಿಕೊಂಡು ಹೋದರೆ ಆ ವಸ್ತ್ರಗಳ ಮೇಲೆ ಕೆಸರಿನ ಹನಿಗಳು ಸಿಡಿದು, ಅವು ಕೆಟ್ಟು ಹೋಗುವುವು ; ಏನುಮಾಡಲಿ ?

**ಬೀಬಿ**—(ವಸ್ತ್ರಭೂಷಣಗಳನ್ನು ಧರಿಸಿ ಪ್ರವೇಶಿಸುವಳು.)

**ಕಬೀರ**—ಪ್ರಿಯೇ ! ಈಗ ಬೀದಿಯೆಲ್ಲವೂ ಕೆಸರಾಗಿರುವುದು; ನೀನು ನಡೆದು ಬಂದರೆ ನಿನ್ನ ಪಾದಗಳೂ ವಸ್ತ್ರಗಳೂ ಕೆಸರಾಗುವುವು. ಅದರಿಂದ ಶ್ರೀಮಂತನಿಗೆ ಅಸಮಾಧಾನವುಂಟಾದೀತು. ಆದಕಾರಣ ನಾನು ನಿನ್ನನ್ನೆತ್ತಿಕೊಳ್ಳುವೆನು. ನೀನು ಸಂಕೋಚಪಡಬೇಡ.

**ಬೀಬಿ**—(ವ್ಯಸನದಿಂದ) ದೇಹಾಭಿಮಾನವನ್ನು ತೊರೆಯುವ ಉಪದೇಶವನ್ನು ಪಡೆದ ನಾನು ಯಾವ ಪ್ರತ್ಯುತ್ತರವನ್ನೂ ಹೇಳಲಾರೆನು !

**ಕಬೀರ**—೩೮.

**ಕಂ||** ರಾಮಾ ! ರಮಣೀಯಗುಣೋ |
ದ್ದಾಮಾ ! ಸಂಸಾರ ತಾರಕೋಜ್ವಲನಾಮಾ ||
ಭೂಮಿಸುತಾ ಸಂತಾಪ್ಯವಿ |
ರಾಮಾ ! ಮುಕ್ತಿಪ್ರದಾನ ಚಣ ರಘುರಾಮಾ ||

(ಕರೆದುಕೊಂಡು ಹೋಗುವನು.)

## ದೃಶ್ಯ ೫ (ರತ್ನಾಕರನ ಮನೆ.)

**ರತ್ನಾಕರ**—ಏನಿದು ಆಶ್ಚರ್ಯವು ! ಆ ಮಧುಮೋಹಿನಿಯನ್ನು ನಾನು ಗಂಗಾನದಿಗೆ ತಳ್ಳಿ ನಿಶ್ಚಿಂತನಾದೆನೆಂದಿದ್ದೆನು. ಕ್ಷಣಕ್ಕೊಂದಾವೃತ್ತಿ ಅವಳೇ ನನ್ನೆದುರಲ್ಲಿ ನಿಂತಿರುವಂತೆ ಕಾಣುವುದು ! ಕಣ್ಣು ಮುಚ್ಚಿದರೆ ಅವಳು ಬಂದು ನನ್ನನ್ನು ನಾನಾವಿಧವಾಗಿ ಪೀಡಿಸಿದಂತೆ ಸ್ವಪ್ನವಾಗುವುದಲ್ಲಾ ! ಏನಿದು ? ಆಹಾ ! ಮನಸ್ಸಿನಲ್ಲಿ ಏನೋ ಕಳವಳವು ತೋರುತ್ತಿರುವುದು.

**ಕಾಕೋದರ**—(ಪ್ರವೇಶಿಸಿ) ಮಿತ್ರಾ! ವಿಷಯವು ಹೇಗೆ ಪಕ್ವವಾಯಿತು ನೋಡಿದೆಯಾ ?

**ರತ್ನಾಕರ**—ನೀನು ಮಹಾ ಚತುರನಲ್ಲವೇ ? ಹೇಗಾದರೂ ಆಗಲಿ. ಈ ಅದ್ಭುತ ಕಾರ್ಯವನ್ನು ಮಾಡಿದ ನಿನ್ನ ಸಾಹಸವನ್ನೆಷ್ಟೆಂದು ಕೊಂಡಾಡಿದರೂ ತೀರದು. ಇದೋ! ಈ ರತ್ನಹಾರವನ್ನು ನನ್ನ ಪಾರಿತೋಷಿತವಾಗಿ ಸ್ವೀಕರಿಸು

**ಕಾಕೋದರ**—ಮಿತ್ರಾ! ನಿನ್ನ ಇಷ್ಟಾರ್ಥವು ಫಲಿಸಿದುದೇ ನನಗೆ ಬಹುಮಾನವೆಂದು ಭಾವಿಸಿರುವೆನು. ನನಗೆ ಬೇರೆ ಬಹುಮಾನವನ್ನು ಕೊಡಬೇಕೇ ? (ಹಾರವನ್ನು ಧರಿಸಿಕೊಳ್ಳುವನು.)

**ಕಬೀರ**—(ಪತ್ನಿಯೊಡನೆ ಪ್ರವೇಶಿಸುವನು )

**ರತ್ನಾಕರ**—(ಆತ್ಮಗತ) ಈತನೆಂತಹ ಮಹನೀಯನು! ನಿಷ್ಕಲ್ಮಷಚಿತ್ತನು ನಿಸ್ಸಂದೇಹವಾಗಿ ಪತ್ನಿಯನ್ನು ತಂದೊಪ್ಪಿಸಿದನಲ್ಲವೇ! ಹೇಗಾದರೂ ಆಗಲಿ ನನ್ನಭೀಷ್ಟವು ಫಲಿಸಿತು. (ಕಾಕೋದರನನ್ನು ನೋಡಿ) ಮಿತ್ರಾ! ಕಾಕೋದರಾ! ಪತ್ರವನ್ನು ಕ್ರಮವಾಗಿ ಬರೆಯಿಸಿಕೊಂಡು ಮಹನೀಯರಿಗೆ ಮುನ್ನೂರು ವರಹಗಳನ್ನು ಕೊಡಿಸಿ ಕರಣಿಕನಿಂದ ಲೆಕ್ಕದಲ್ಲಿ ಬರೆಯಿಸು ಹೋಗು, ಸಾಧುಗಳು ಕಾದಿರುವರು. (ಸೇವಕನನ್ನು ನೋಡಿ) ಎಲವೋ! ಸೇವಕಾ! ಹಣದೊಡನೆ ಇವರನ್ನು ಮನೆಗೆ ಬಿಟ್ಟು ಬಾ! ಕಾಕೋದರನೊಡನೆ ಹೋಗು.

**ಲಿಂಗ**—ಅಪ್ಪಣೆ (ಕಾಕೋದರ, ಸೇವಕ ಹೋಗುವರು. ರತ್ನಾಕರನು ಒಳಗೆ ಹೋಗುವನು.)

**ಕಬೀರ**—ಕಂ|| ಶ್ರೀರಾಮ! ನಿನ್ನ ಪದಯುಗ |
ದಾರಾಧನೆಗೆಂದು ಸತಿಯು ನಿತ್ತಪೆ ನಕಟಾ! ||
ಮೀರಿದ ಪರೀಕ್ಷೆಗೆನ್ನಂ |
ಸೇರಿಸಿ ದೀ ನಿನ್ನಭೀಷ್ಟಮಿನ್ನೆಂತಿಹುದೋ! ||೯೧||

ಆಹಾ! ಸಕಲ ವಿಷಯದಲ್ಲಿಯೂ ನನ್ನನ್ನೇ ನಂಬಿ ಧರ್ಮಾದಿ ಪುರುಷಾರ್ಥಗಳಲ್ಲಿ ನನ್ನ ಛಾಯಾನುವರ್ತಿನಿಯಾಗಿದ್ದ ಪರಮ ಪತಿವ್ರತೆಯಾದ ಈ ಧರ್ಮಪತ್ನಿಯನ್ನು ಇಂದಿಗೆ ನಾನು ಕೈ ಬಿಟ್ಟೆನಲ್ಲಾ!

ವಿಧಿಯೇ! ರಾಮ ಸೇವೆಗಾಗಿ ತನ್ನ ಪತಿಪುತ್ರರನ್ನು ಸಹ ತೊರೆದು ಪರಸೇವಾವೃತ್ತಿಯನ್ನು ಕೈಕೊಂಡು ತನುವನ್ನು ತೆತ್ತ ಈ ಸಾಧ್ವಿಯ ಗುಣಕ್ಕೆ ಮೆಚ್ಚಿ ಸಂತೋಷಪಡಲೇ? ನನ್ನನ್ನು ಕೈವಿಡಿದುದಕ್ಕೆ ಈಕೆಗೆ ಈ ದುರ್ಗತಿಯನ್ನು ತಂಪ ನನ್ನ ದುರದೃಷ್ಟವನ್ನೂ, ನಿಂದ್ಯ ವಾದ ನನ್ನ ಈ ಪತ್ನೀವಿಕ್ರಯ ಕಾರ್ಯವನ್ನೂ, ಆಕೆಗೆ ಈಗ ಒದಗಿರುವ ಸಂಕಟವನ್ನೂ ಕುರಿತು ದುಃಖಿಸಲೇ? ಹಾ! ವಿಧಿಯೇ! ಎಂತಹ ಸಂದರ್ಭಗಳನ್ನು ಕಲ್ಪಿಸುತ್ತಿರುವೆ? ಬಾಷ್ಪಪೂರಿತ ಕಟಾಕ್ಷಗಳಿಂದ ನನ್ನನ್ನೇ ನೋಡಿ ಸಂಕಟಪಡುತ್ತಿರುವ ಈಕೆಯ ಮುಖವನ್ನು ಹೇಗೆ ನೋಡಲಿ! ಈಕೆಯನ್ನು ಹೇಗೆ ಬಿಟ್ಟುಹೋಗಲಿ!

**ಬೀಬಿ**—ಹಾ! ದೈವವೇ! ಪತಿಯೇ ಪರದೈವವೆಂದು ನಂಬಿ ನಿತ್ಯವೂ ಆತ ನೊಡನೆ ರಾಮ ಸೇವಾಧುರೀಣಳಾಗಿ ಆನಂದದಿಂದಿದ್ದ ನಾನು ಈದಿನ ಪ್ರಾಣಾಪ್ತನಾದ ಪತಿಯನ್ನೂ ಪುತ್ರನನ್ನೂ ತೊರೆದು ಪರಸೇವೆಗಾಗಿ ಈ ತನುವನ್ನು ತೆರಬೇಕಾಯಿತೇ? ಅಯ್ಯೋ! ಕೈಯಿಂದಾದ ಉಪ ಚಾರಗಳಿಂದ ಪತಿಸುತರಲ್ಲಿ ಸಂತೋಷವನ್ನುಂಟುಮಾಡಿ ನಿಶ್ಚಿಂತಳಾಗಿ ರುತ್ತಿದ್ದ ನನ್ನ ಸ್ವಾತಂತ್ರ್ಯವು ಇಂದಿಗೆ ಹಾಳಾಯಿತೇ? ಶ್ರೀರಾಮಾ! ನಿನ್ನ ಸೇವೆಗಾಗಿ ನಾವುಗಳು ಈರೀತಿ ಪರಸ್ಪರ ಅಗಲಿ ದುಃಖಿಸಬೇ ಕಾಯಿತೇ? ಈ ಲೀಲೆಯನ್ನು ನೋಡಿ ನೀನು ಆನಂದಪಡಬೇಕೆಂದಿ ದ್ದೆಯಾ? ಹಾ! ರಾಮಭದ್ರಾ! ಈ ನಮ್ಮ ವಿರಹವ್ಯಥೆಯು ಹೃದ ಯವನ್ನು ಭೇದಿಸುತ್ತಿದ್ದರೂ ಪರಿಪಕ್ವವೈರಾಗ್ಯದಿಂದ ಚಿತ್ತವನ್ನು ಸ್ಥಿರಪಡಿಸಿಕೊಳ್ಳುತ್ತಿರುವ ಈ ನನ್ನ ಪ್ರಿಯನನ್ನು ಇನ್ನೆಷ್ಟು ಪರೀಕ್ಷಿ ಸುವೆ? ಇನ್ನು ನಮ್ಮ ಪ್ರೇಮ ಪುತ್ರನನ್ನು ಸಂತವಿಸುವರು ಯಾರು? ಆಹಾ! ವಿಧಿಯ ವಿಪರೀತ ಚರ್ಯೆಗಳು ಯಾವರೀತಿಯೊದಗಿದುವು!

**ಕಬೀರ**—ಕ್ಷಿ

ಕಂ|| ಕನಸಿನ ತೆರದಿಹ ಲೋಕವೆ |
ಮನದುದಿಸುವ ಖೇದ ಮೋದ ಭೇದಮುದೆಲ್ಲಂ ||
ತನುವಿಂದುದಿಪ ವಿಕಾರವು |
ದನಿಸುತೆ ಸನ್ಮುಕ್ತಿ ಪಥಕೆ ಕಂಟಕಮಕ್ಕುಂ ||೪೨||

(ಆತ್ಮ) ನನಗೇಕೆ ಈ ಅಂಧಕಾರವು ಕವಿಯಿತು ! ಛಿ ! ಛಿ ! ದುಃಖವೆಂದರೇನು ? ವಿರಹವೆಂದರೇನು ? ಸತಿಯೆಂದರೇನು ? ಪತಿಯೆಂದರೇನು ? ಅಭಿಮಾನತ್ಯಾಗವನ್ನು ಆಕೆಗೆ ಬೋಧಿಸಿ ಕರೆತಂದ ನಾನೇ ಈರೀತಿ ವ್ಯಥೆಪಡಬಹುದೇ ? ಛೀ ! ಛೀ ! ಈ ಹಾಳು ಪಾರ್ಥಿವ ಶರೀರಧಾರಿಗಳಿಗೆ ಲೋಕವ್ಯವಹಾರ ಗಮನದಿಂದ ಆಗಾಗ ಇಂತಹ ಭ್ರಾಂತಿಯೊದಗುತ್ತಿರುವುದಲ್ಲವೇ ! ನನಗೇತಕ್ಕೆ ವ್ಯಥೆಯು ! (ಪ್ರಕಾಶಂ) ಪ್ರಿಯೇ ! ರಾಮ ಸೇವೆಗಾಗಿ ಹಣವನ್ನು ತೆಗೆದುಕೊಂಡು ಹೋಗುವೆನು. ನೀನು ಶ್ರೀರಾಮಚಂದ್ರನನ್ನು ಧ್ಯಾನಿಸುತ್ತ ಈ ಶ್ರೀಮಂತನ ಮನೆಯ ದಾಸಿಯಾಗಿರು. (ಹೋಗುವನು.)

**ಬೀಬಿ**—ಳಂ (ಕಬೀರನು ಹೊರಟು ಹೋದುದನ್ನು ನೋಡಿ ಕಣ್ಣೀರನ್ನು ಸುರಿಸುತ್ತ) ಅಯ್ಯೋ ! ಕಾಂತನು ದೃಢಚಿತ್ತನಾಗಿ ಹೊರಟೇಹೋದನು. ಈಗ ನಾನು ಅನಾಥಳಾದೆನೇ ! ನನ್ನ ಸ್ವಾತಂತ್ರ್ಯವು ಹಾಳಾಯಿತೇ ! ನನ್ನ ಸಂತೋಷವು ನಾಶವಾಯಿತೇ ! ನನ್ನ ಪತಿಸೇವೆಯೂ ಪುತ್ರ ಲಾಲನೆಯೂ ಕೊನೆಗಂಡವೇ ! ಶ್ರೀರಾಮಾ ! ನನ್ನಲ್ಲಿ ನಿನಗೆ ದಯೆ ಬರಲಿಲ್ಲವೇ ! ಹಾ ! ವಿಧಿಯೇ ! ಬಡತನದಿಂದ ಇದ್ದರೂ, ಸ್ವಾತಂತ್ರ್ಯ ಸಂತೋಷದಿಂದ ನಮ್ಮ ಕುಟೀರವೇ ನನಗೆ ಅರಮನೆಯಂತೆ ಇತ್ತಲ್ಲವೇ ! ಅಯ್ಯೋ ! ಈಗ ಈ ಅರಮನೆಯು ನನಗೆ ಸೆರೆಮನೆಯಾಗಿರುವುದಲ್ಲಾ ! ಈ ನಿರ್ಬಂಧವೂ, ಈ ಸಂಕಟವೂ ನನಗೆಂದಿಗೆ ತಪ್ಪುವುದು ! (ಚಿಂತಿಸಿ) ಛೀ ! ಛೀ ! ಇನ್ನು ನನಗೆ ಸ್ವಾತಂತ್ರ್ಯವೆಂದರೇನು ? ದರಿದ್ರನಾದ ನನ್ನ ಪತಿಯು ಇಷ್ಟು ಹಣವನ್ನು ಮತ್ತೆ ತಂದು ಕೊಟ್ಟು ನನ್ನನ್ನು ಬಿಡಿಸಿಕೊಂಡು ಹೋಗುವುದೆಂದರೇನು ! ಅಯ್ಯೋ ! ಪರಮಾತ್ಮಾ ! ನಾನೀ ಸಂಕಟವನ್ನೆಷ್ಟು ದಿನಗಳನುಭವಿಸಬೇಕು ! ಪರಗೃಹದಾಸಿಯಾಗಿರುವ ನನಗೆ ದಿಕ್ಕು ಯಾರು ! ಹಾ ! ವಿಧೀ ! ಈ ದುಃಖವನ್ನು ಹೇಗೆ ಸಹಿಸಿಕೊಂಡು ಪ್ರಾಣದಿಂದಿರಲಿ ? ಆತ್ಮಹತ್ಯವನ್ನಾದರೂ ಮಾಡಿಕೊಳ್ಳಲೇ ! (ಚಿಂತಿಸಿ) ಛೀ ! ಛೀ ! ದಾಸಿಯಾದ ನನಗೆ ಅಂತಹ ಸ್ವಾತಂತ್ರ್ಯವುತಾನೆ ಎಲ್ಲಿಯದು ! ಶ್ರೀಮಂತನಿಗೆ ದಾಸಿಯಾಗಿರಲು ಆಜ್ಞಾಪಿಸಿದ ನನ್ನ ಪತಿಯಾಜ್ಞೆಯನ್ನುಲ್ಲಂಘಿಸಿ, ದಣಿಗೆ ಮೋಸಮಾಡಿ, ಆತ್ಮಹತ್ಯಾದೂಷಿ

ತಳಾಗಿ, ಈ ಮೂರು ಪಾಪಗಳನ್ನೂ ಏಕಕಾಲದಲ್ಲಿ ಅರ್ಜಿಸಿದಂತಾ ಗುವ್ರದಲ್ಲವೇ ? ಅಲ್ಪಕಾರಣದಿಂದ ಅಧಿಕಕೋಪಿಗಳಾಗಿ ಹಠವನ್ನು ಹಿಡಿದು, ವಾಪೀಕೂಪಪ್ರವೇಶದಿಂದಾಗಲಿ, ವಿಷಪಾನದಿಂದಾಗಲಿ, ರಜ್ಜು ಬಂಧನದಿಂದಾಗಲಿ ಪ್ರಾಣವನ್ನು ನೀಗಿ ದೂಷಿತರಾಗಿ, ಪಾಪಾರ್ಜನೆ ಯಿಂದ ಇಹಪರಗಳಲ್ಲಿ ಗತಿಯನ್ನು ಕಳೆದುಕೊಳ್ಳುವ ದುಷ್ಟ ಸ್ತ್ರೀಯ ರಂತೆ ನಾನು ದೂರಾಲೋಚನೆಯಿಲ್ಲದೆ ಆತ್ಮಹತ್ಯದ ದುರಾಲೋಚನೆ ಯನ್ನು ಮಾಡಬಹುದೇ? ಛೀ! ಛೀ! ಹಾಗೆ ಮಾಡಿದರೆ ಈ ಜನ್ಮದ ಪಾಪ ಶೇಷದ ಫಲವನ್ನೂ ನೂತನವಾಗಿ ಆರ್ಜಿಸಿದ ಪಾಪಗಳ ಫಲವನ್ನೂ ಅನುಭವಿಸುವುದಕ್ಕಾಗಿಯೇ ಇನ್ನೂ ಜನ್ಮಗಳನ್ನು ಹೆಚ್ಚಿಸಿಕೊಳ್ಳಬೇಕಾ ಗುವುದಲ್ಲಾ ! ಇಲ್ಲ ! ಆತ್ಮಹತ್ಯವನ್ನೆಂದಿಗೂ ಮಾಡಿಕೊಳ್ಳತಕ್ಕು ದಲ್ಲ. ಹಾಗೆ ಮಾಡಿದರೆ ನನ್ನ ಪತಿಯಾಜ್ಞೆಯೇನಾಯಿತು ? ನನ್ನ ಪಾತಿವ್ರತ್ಯವೇನಾಯಿತು ? ಲೋಕದಲ್ಲಿ ಸತಿಗೆ ಪತಿಯೇ ಪರದೈವ ವಲ್ಲವೇ ?

|| ಸೀಸಪದ್ಯ ||

ಪತಿಯೆ ನಾರಿಗೆ ಜಗದಿ ಪಾಪನಾಶಕ ಗುರುವು |
ಪತಿಯೆ ಪಾವನದೈವ ಪತಿಯೆ ಜೀವ ||
ಪತಿಯೆ ಘನಧನಕನಕ ಪತಿಯೆ ರತ್ನಾಭರಣ |
ಪತಿಯೆ ಭವಸಂತರಣ ಪತಿಯೆ ಶರಣ ||
ಪತಿಯೆ ಗತಿದಾಯಕನು ಪತಿಯೆ ಮತಿಶೋಧಕನು|
ಪತಿಯೆ ದುಃಖವನಳಿವ ಪರಮಬಂಧು ||
ಪತಿಯೆ ತನು ಪತಿಯೆ ಮನ ಪತಿಯೆ ನಿಜಮಾಂಗಲ್ಯ |
ಪತಿಯೆ ಸಕಲಾನಂದ ಪಾರಿಜಾತ ||

ಗೀ|| ಪತಿಯ ನೊಲಿಪಳೆ ಪತಿವ್ರತೆ ಸನ್ನುತೆ |
ಮತಿವಂತೆ ಗುಣವಂತೆ ಭಾಗ್ಯವಂತೆ ||
ಪತಿಭಕ್ತಿಯಿಲ್ಲದಿಹ ಸತಿಯೆ ಜಗದಿ |
ಪತಿತಳೆನಿಸಿದ ಪರಮಪಾಪಿಯಲ್ತೇ ! ||೪೪||

(ದುಃಖಿಸುತ್ತ) ದೇಹಾಭಿಮಾನ ತ್ಯಾಗದಿಂದ ಚಿತ್ತವನ್ನು ಸ್ಥಿರಪಡಿಸಿ ಕೊಳ್ಳದಿದ್ದರೆ ವಿಧಿಯಿಲ್ಲ ಶ್ರೀರಾಮನ ಸೇವೆಗಿಂತಲೂ ಅತಿಶಯವಾದ ಕಾರ್ಯವಿನ್ನಾವುದಿರುವುದು ! ಪತಿಯಾಜ್ಞೆಯನ್ನು ಪಾಲಿಸುವುದಕ್ಕಿಂತಲೂ ಕರ್ತವ್ಯವೇನಿರುವುದು ?

ಭಾ॥ ಪರಮ ಪಾತಿವ್ರತ್ಯಭರದಿಂ ।
ದುರಿಯ ಪೊಕ್ಕಳು ದಕ್ಷಸುತೆ ಭೂ ।
ಸುರನ ಮನೆಯೊಳಿಗೆವನೊಂತಳು ಚಂದ್ರಮತಿ ದೇವಿ ॥
ಧರಣಿಸುತೆ ಯಡವಿಯನೆ ಸಾರ್ದಳು ।
ಪರಗೃಹದೆ ಪಾಂಚಾಲಿ ಸೇವಾ ।
ನಿರತಳಾದಳು ಪತಿಯ ನೊಲಿಸದ ಸತಿಯೆ ಪಾಪಿಯಲಾ ॥೪೫॥

ಆದಕಾರಣ ಪತಿಯಾಜ್ಞೆಯನ್ನು ಪಾಲಿಸಿ ಶ್ರೀರಾಮ ಸೇವೆಗೆ ಸಹಾಯ ಮಾಡುವ ಈ ಕಾರ್ಯದಲ್ಲಿ ನಾನು ವ್ಯಥೆಪಡ ತಕ್ಕುದಲ್ಲ.

ರತ್ನಾಕರ— (ಬಂದು) ಏತಕ್ಕೆ ಇನ್ನೂ ಆ ಮೋಹಿನಿಯು ಒಳಗೆ ಬರಲಿಲ್ಲ ! (ಬೀಬಿಯ ಬಳಿಗೆ ಬಂದು)

ಕಂ॥ ಸುಂದರಿ ನಿನ್ನ ಮುಖೇಂದುವ ।
ನಿಂದೀಕ್ಷಿಸಿ ಪರಿದುದೆನ್ನ ಚಿಂತಾತಿಮಿರಂ ॥
ಕುಂದದ ಮಧುರಾಧರ ಸುಧೆ ।
ಯಿಂದೀ ಮದನಜ್ವರಾರ್ತನಂ ಪೊರೆ ರಮಣೀ ॥೪೬॥

ಮಂಗಳಾಂಗೀ ! ನಿನ್ನಾಗಮನದಿಂದ ಪರಮಾನಂದ ಭರಿತನಾದೆನು. ಬಾ ! ನಿನ್ನ ಸರಸಲೀಲೆಯಿಂದ ನನ್ನನ್ನಾನಂದಿಸು

ಬೀಬಿ— (ಚಕಿತಳಾಗಿ ದುಃಖಿಸುತ್ತ) ಶ್ರೀಮಂತರೇ ! ನಿಮಗೆ ನಾನು ದಾಸಿಯು. ನನ್ನಲ್ಲಿ ನೀವು ವಿವೇಚನೆಯಿಲ್ಲದೆ ಮಾತನಾಡುತ್ತಿರುವಂತೆ ಕಾಣುವಿರಿ ; ಇದು ನಿಮಗೆ ಇಹಪರಗಳೆರಡಲ್ಲಿಯೂ ಅಶ್ರೇಯ

ಸ್ಸನ್ನುಂಟುಮಾಡುವುದು. ನೀವು ನನ್ನನ್ನು ದಾಸಿಯಾಗಿ ಒತ್ತೆಯಿಟ್ಟು ಕೊಂಡಿರುವಿರಲ್ಲದೆ ಬೇರೆಯಲ್ಲ. ಪರಪತ್ನಿಯಾಗಿ, ನಿಮ್ಮ ದಾಸಿಯಾಗಿ ಬಂದಿರುವ ನನ್ನನ್ನು ನೀವು ಈರೀತಿ ಮಾತನಾಡಿಸಬಾರದು.

**ರತ್ನಾಕರ** — ಎಲೌ! ರಮಣೀ! ಈಗ ಸಕಲ ವಿಷಯಗಳಲ್ಲಿಯೂ ನೀನು ನನ್ನ ಅಧೀನಳು. ನಿನಗೆ ಯಾವ ಸ್ವಾತಂತ್ರ್ಯವೂ ಇಲ್ಲ. ನನ್ನ ಆಜ್ಞೆಗೆ ಒಳಪಟ್ಟಿರುವುದೇ ನಿನ್ನ ಕರ್ತವ್ಯವು. ಆದುದರಿಂದ ನೀನು ಯಾವ ಮಾತನ್ನಾಡಿದರೂ ಫಲವಿಲ್ಲ ನಿನ್ನನ್ನು ಬಲಾತ್ಕರಿಸಲು ನನಗೆ ಸ್ವಾತಂತ್ರ್ಯವಿರುವುದು ಆದರೆ ತಾನೊಲಿದ ರಮಣಿಯು ತನ್ನಲ್ಲಿ ಪ್ರೀತಿಸಿ ಬಂದಲ್ಲದೆ ವಿಲಾಸವು ಸರಸವಾಗಲಾರದು, ಆದುದರಿಂದ ನೀನು ಪ್ರಸನ್ನಳಾಗಿ ನನ್ನೊಡನೆ ಸುಖಿಸೆಂದು ಹೇಳಿದೆನು. ಆದರಿಂದ ನನ್ನ ಮಾತನ್ನು ಕೇಳು.

**ಬೀಬಿ**—ಅಯ್ಯೋ! ಶ್ರೀಮಂತರಾದ ನಿಮಗೆ ಬಡದಾಸರ ಪತ್ನಿಯಾದ ನನ್ನಂತಹ ಅಗರ್ಭದರಿದ್ರಳು ಸರಸಕ್ಕೆ ತಕ್ಕವಳಲ್ಲ. ಅಲ್ಲದೆ ಪರಸ್ತ್ರೀ ಯನ್ನು ನೀವು ಸೋದರಿಯರಂತೆ ಭಾವಿಸಬೇಕಾದುದು ಧರ್ಮವು.

**ರತ್ನಾಕರ**—ಆ ಧರ್ಮಶಾಸ್ತ್ರ ಬೋಧನೆಗಾಗಿ ನಾನು ನಿನ್ನನ್ನು ಬಯಸಲಿಲ್ಲ. ನೀನು ಹೇಳಿದಂತೆ ಅಗರ್ಭದರಿದ್ರಳಾದ ನಿನ್ನ ದಾರಿದ್ರ್ಯವು ಈಗ ನಾಶವಾಯಿತೆಂದು ತಿಳಿ. ಈಗ ನೀನು ಆ ದರಿದ್ರನಾದ ಕಬೀರದಾ ಸನಿಗೆ ತಕ್ಕವಳಲ್ಲ. ಶ್ರೀಮಂತನಾದ ನನಗರ್ಹಳಾಗಿರುವೆ; ಅದರಿಂದ ಮೂರ್ಖತ್ವವನ್ನು ಬಿಟ್ಟು ನನ್ನಿಷ್ಟಕ್ಕೆ ಸಮ್ಮತಿಸಿ ನನಗಾನಂದವನ್ನುಂ ಟುಮಾಡಿ ನೀನೂ ಸಂತೋಷದಿಂದ ಬಾಳಿ ಶ್ರೀಮಂತಳೆನಿಸು.

**ಬೀಬಿ**—ಶ್ರೀರಾಮಚಂದ್ರಾ! ನಿನ್ನ ಸೇವೆಗಾಗಿ ನಾನು ಈರೀತಿ ಶರೀರ ವನ್ನು ಪರಾಧೀನಮಾಡಿಕೊಳ್ಳುವಂತೆ ಸಂಧಿಯನ್ನು ಕಲ್ಪಿಸಿ, ಈಗ ನನಗೆ ಮಾನಚ್ಯುತಿಯನ್ನೂ ತಂದು ಈ ವಿನೋದವನ್ನು ನೋಡುತ್ತ ಸುಮ್ಮನಿರುವೆಯಾ ? ಹಾ! ರಘುಕುಲತಿಲಕಾ! ಮಾತೆಯಾದ ಸೀತಾ ದೇವಿಯು ಆ ನೀಚರಾವಣನ ಕೈಗೆ ಸಿಕ್ಕಿ ನರಳುತ್ತಿದ್ದಾಗ ಆಕೆಯ ಸ್ಥಿತಿಯು ಹೇಗಿತ್ತೆಂಬುದನ್ನು ತಿಳಿದ ನೀನು ಆತನನ್ನು ಶಿಕ್ಷಿಸಿ ಜಾನಕಿ ಯನ್ನು ಪಾಲಿಸಲಿಲ್ಲವೇ! ಪರಮಾತ್ಮಾ! ಸಭಾಮಧ್ಯದಲ್ಲಿ ಮಾನ ಚ್ಯುತಿಗಾಗಿ ಸೆಳೆಯಲ್ಪಟ್ಟ ಪಾಂಚಾಲಿಯು ಕೃಷ್ಣಾವತಾರಲ್ಲಿದ್ದ

ನಿನ್ನನ್ನು ಸ್ಮರಿಸಿದ ಮಾತ್ರದಿಂದ ಬಂದು ಆಕೆಯ ಮಾನ ರಕ್ಷಣೆ ಯನ್ನು ಮಾಡಲಿಲ್ಲವೇ! ಅವರಂತೆಯೇ ನಾನೂ ನಿನ್ನ ಭಕ್ತಳಲ್ಲವೇ? ಆರ್ತಳಾಗಿ ಮೊರೆಯಿಡುವ ನನ್ನ ಪ್ರಾರ್ಥನೆಯನ್ನಾಲಿಸಿ ನನ್ನನ್ನು ಕಾಪಾಡಿ ಭಕ್ತಪರಾಧೀನನೆಂಬ ಬಿರುದನ್ನು ನನಗೆ ವ್ಯಕ್ತಗೊಳಿಸಲು ಇದು ನಿನಗೆ ಸುಸಮಯವಲ್ಲವೇ? ನೀನೇ ಗತಿ, ನೀನೇ ಸಮಸ್ತವೂ ಯೆಂದು ನಂಬಿರುವ ನನ್ನನ್ನು ನೀನು ಪಾಲಿಸದಿದ್ದರೆ ಕರುಣಾಕರ ನೆಂಬ ನಿನ್ನ ಬಿರುದಿಗೆ ಚ್ಯುತಿ ಬರುವುದಿಲ್ಲವೇ? ಹಾ! ಶ್ರೀರಾಮ ಚಂದ್ರಾ! ಏತಕ್ಕೆ ನಿನಗಿನ್ನೂ ದಯೆ ಬರಲಿಲ್ಲ.

ರತ್ನಾಕರ—ಎಲೌ! ರಮಣೀ! ಈ ಗೋಳಾಟದಿಂದ ಯಾವ ಫಲವೂ ಇಲ್ಲ. ನಿನ್ನ ಮೇಲೆ ಸರ್ವ ಸ್ವಾತಂತ್ರ್ಯವನ್ನೂ ಪಡೆದಿರುವ ನನ್ನಿಂದ ಯಾರೂ ನಿನ್ನನ್ನು ಬಿಡಿಸಲಾರರು. ಆ ರಾಮಚಂದ್ರನು ಬಂದು ನಿನ್ನನ್ನು ಬಿಡಿಸಿಕೊಳ್ಳುವನೋ? ಅಯ್ಯೋ! ಮರುಳೇ! ಸಮ್ಮನೆ ಬಂದು ನನ್ನಿಷ್ಟದಂತೆ ವರ್ತಿಸಿ ಸುಖಿಸು. (ಕೈ ಹಿಡಿಯಲು ಬಳಿಗೆ ಹೋಗುವನು.) ೪೧

(ಮಧುಮೋಹಿನಿಯ ಪಿಶಾಚದಂತೆ ಭಯಂಕರಾಕಾರವು ಆಕೆಯ ಮುಂದೆ ರತ್ನಾಕರನಿಗೆ ಕಾಣ ಬರುವುದು.)

ರತ್ನಾಕರ—(ಭಯಾತುರಗಳಿಂದ ಕೂಗಿಕೊಂಡು) ಹಾ! ಇದೇನು ಈ ಅದ್ಭುತವು? ಮಧುಮೋಹಿನಿಯು ಈ ಭಯಂಕರಾಕಾರದಿಂದ ಬಂದು ನಿಂತಿರುವಳು. ಅಯ್ಯೋ! ಅಯ್ಯೋ! ಇನ್ನೇಸುಗತಿ! ಹಾ! ಅವಳು ಗಂಗಾನದಿಯಲ್ಲಿ ಮುಳುಗಿ ಹೋದವಳಲ್ಲವೇ? ಅವಳ ರೂಪ ವಿಲ್ಲಿ ಕಾಣಲೇನುಕಾರಣ! (ಸುತ್ತಲೂ ನೋಡಿ ಏನನ್ನೂ ಕಾಣದೆ) ಏನಿದು! ಮಧುಮೋಹಿನಿ ಎಲ್ಲಿರುವಳು? ಸುಂದರಿಯು ಮಾತ್ರ ನಿಂತಿರುವಳು. ಛೀ! ಛೀ! ಆ ಹಾಳು ಮಧುಮೋಹಿನಿಯನ್ನು ನಾನು ಸ್ಮರಿಸುತ್ತಿದ್ದ ಕಾರಣ ಈರೀತಿ ಮನೋವಿಕಾರವುಂಟಾಗಿರಬೇಕು! ಅಷ್ಟೆ! ಅಷ್ಟೆ! ಇದಕ್ಕೆ ನಾನೇತಕ್ಕೆ ಭಯಪಡಬೇಕು! (ಬೀಬಿಯ ಬಳಿಗೆ ಬಂದು) * ಪ್ರಿಯೇ! ಬಾ! (ಕೈ ಹಿಡಿಯಲು ಹೋಗುವನು.) (ಭೀಕರಪಿಶಾಚವು ಮತ್ತೆ ಕಾಣುವುದು) (ಬೆದರಿ) ಅಯ್ಯಯ್ಯೋ!

ಮತ್ತೆ ಪಿಶಾಚವು ಬಂತು ! (ಬಿದ್ದು ಚೇತರಿಸಿಕೊಂಡು ಎದ್ದು) ಎಲ್ಲಿ! ಪಿಶಾಚವು ಇಲ್ಲವಲ್ಲಾ ! ಛೀ! ಇದು ಭ್ರಾಂತಿಯು!! (ಮತ್ತೆ ಬೀಬಿಯ ಬಳಿಗೆ ಹೋಗಿ) *ರಮಣೀ ! ಈಗಲಾದರೂ ನನ್ನ ಮಾತನ್ನು ಕೇಳು.

(ಪಿಶಾಚವು ಕಾಣುವುದು)

(ಬೆದರಿ) ಅಯ್ಯೋ ! ಅಯ್ಯೋ ! (ಅರಚಿಕೊಳ್ಳುತ್ತ ಓಡುವನು. ಎಲ್ಲೆಲ್ಲಿಯೂ ಪಿಶಾಚಗಳು ಕಾಣುವುವು.) ಅಯ್ಯೋ ! ಅಯ್ಯೋ ! ಮಧುಮೋಹಿನೀ ! ಮಧುಮೋಹಿನೀ ! ಅಯ್ಯೋ ! ಇಲ್ಲಿಗೇತಕ್ಕೆ ಬಂದೆ ! ಇಷ್ಟು ಆಕಾರಗಳಿಂದ ಹೇಗೆ ನಿಂದೆ ! ಅಯ್ಯೋ ! ಅಯ್ಯೋ . ಕೈ ಕಾಲುಗಳು ನಡುಗುವುವು ! ನಾನು ನಿಲ್ಲಲಾರೆನು ! ನಿಲ್ಲಲಾರೆನು! ಇನ್ನೇನುಗತಿ ! ಎದೆಯು ಕಂಪಿಸುವುದು ! ನನಗೆ ರಕ್ಷಕರು ಯಾರು ? (ಆಗಾಗ ನೋಡಿ ಬೆದರಿ ಕಿರಚಿಕೊಳ್ಳುವನು) ಇಲ್ಲಿ ಮತ್ತೆ ಯಾರೂ ಇಲ್ಲವು ! ಯಾರಿಗೆ ಹೇಳಲಿ, ಯಾರಿಗೆ ಮೊರೆಯಿಡಲಿ ! ಅಯ್ಯೋ ! (ದುಃಖಿಸುತ್ತ ಚಿಂತಿಸಿ) ಇಲ್ಲಿರುವಳು ಈಕೆಯೊಬ್ಬಳೇ ! ಈಕೆಯ ಕೈ ಹಿಡಿಯಲು ಹೋದರೆ ಈರೀತಿ ಭಯಂಕರಾಕಾರಗಳು ಕಾಣುವುವು ! ಈಕೆಯು ಶ್ರೀರಾಮಭಕ್ತಳು, ಪತಿವ್ರತೆಯು, ಮಹನೀಯನ ಪತ್ನಿಯು, ಈಕೆಯನ್ನು ಬಲಾತ್ಕರಿಸಿದಕಾರಣ ನನಗೀರೀತಿ ಭಯವುಂಟಾಗಿರಬಹುದೇ ! ನೋಡೋಣ ! (ಬಳಿಗ ಬರುತ್ತ ಪಿಶಾಚಗಳನ್ನು ಕಂಡು ಬೆದರಿ ಬೀಬಿಯ ಪಾದಗಳ ಮೇಲೆ ಬಿದ್ದು) ಛೀ ಎಲೌ ಸಾಧ್ವೀಶಿರೋಮಣೀ ! ನಿನ್ನ ಬಳಿಗೆ ಬಂದಾಗಲೆಲ್ಲವೂ ನನಗೆ ಪಿಶಾಚ ದರ್ಶನವಾಗುತ್ತಿರುವುದು, ನನ್ನ ಅಪರಾಧಗಳನ್ನು ಮನ್ನಿಸು. ಶರಣಾಗತನಾಗಿರುವೆನು. ನೀನು ಮಹಾ ಪತಿವ್ರತೆಯು. ನಿನ್ನಲ್ಲಿ ಸುಖವನ್ನು ಬಯಸಿದ ನಾನು ಪರಮಪಾಪಿಯು, ನನ್ನ ಅಪರಾಧಗಳನ್ನು ಮನ್ನಿಸಿ ನನ್ನನ್ನು ಪಾಲಿಸು.

**ಒಳಗೆ)**—ಯಾರು ಉಳಗೆ ? ಬಾಗಿಲನ್ನು ತೆರೆಯಿರಿ.

**ರತ್ನಾಕರ**—(ಆಶ್ಚರ್ಯದಿಂದ) ಯಾರದು ? ಈ ರಾತ್ರಿಯಲ್ಲಿ ಹೀಗೆ ಬಂದು ಕೂಗುತ್ತಿರುವವರು ?

**ಒಳಗೆ)**—ಬಾಗಿಲನ್ನು ತೆರಯಿರಿ ಬಾಗಿಲನ್ನು.

**ರತ್ನಾಕರ**—ಇದೋ ಬಂದೆನು. (ಹೋಗಿ ಬಾಗಿಲನ್ನು ತೆರೆಯುವನು.)

**ಶ್ರೀರಾಮಚಂದ್ರನು**—(ಗ್ರಾಮ ರಕ್ಷಕನ ವೇಶದಿಂದ ಹಣದ ಗಂಟನ್ನು ತಂದು ರತ್ನಾಕರನ ಮುಂದೆಯಿಟ್ಟು) ಸ್ವಾಮಿಾ ! ಶ್ರೀಮಂತರೇ ! ಕಬೀರದಾಸರು ತಮಗೆ ಈ ಹಣವನ್ನು ಕೊಟ್ಟು ಅವರ ಪತ್ನಿಯನ್ನು ಒತ್ತೆಯಿಂದ ಬಿಡಿಸಿ ಕರೆತರುವಂತೆ ನನಗಾಜ್ಞೆ ಮಾಡಿರುವರು. ಇದೋ ತೆಗೆದುಕೊಳ್ಳಿ.

**ಬೀಬಿ**—(ಸಂತೋಷಾಶ್ಚರ್ಯಗಳಿಂದ) ಆಹಾ ! ಶ್ರೀರಾಮಚಂದ್ರಾ ! ನಿನಗೆ ಭಕ್ತಳಾದ ನನ್ನಲ್ಲಿ ದಯೆಯುಂಟಾಯಿತೇ ! ಪರಮಾತ್ಮಾ ಇಷ್ಟು ಬೇಗನೆ ನನ್ನ ಕಾಂತನಿಗೆ ಹಣವು ದೊರಕುವಂತೆ ಮಾಡಿದೆಯಾ ! ಭಕ್ತಪರಾಧೀನಾ ! ಇದೋ ನಿನಗೆ ನಮಸ್ಕರಿಸುವೆನು.

**ರತ್ನಾಕರ**—(ಆಶ್ಚರ್ಯದಿಂದ ನೋಡಿ) ಏನು ? ಏನಿದು ? ಕಬೀರದಾಸರು ನನ್ನ ಹಣವನ್ನು ಹಿಂದಕ್ಕೆ ಕಳುಹಿಸಿದರೇ ?

**ಗ್ರಾಮರಕ್ಷಕ**-(ಶ್ರೀರಾಮ)ಇಲ್ಲ ! ನಿಮ್ಮ ಹಣವು ರಾಮೋತ್ಸವಕ್ಕೆ ಉಪಯೋಗವಾಯಿತು. ಇದು ಅವರಿಗೆ ಬೇರೆ ಕಡೆಯಿಂದ ಒದಗಿದ ಹಣವು.

**ರತ್ನಾಕರ**—ಚೆನ್ನಾಯಿತು ! ಕಬೀರದಾಸರು ಎಂತಹ ಮಹನೀಯರು !! (ನಾಣ್ಯಗಳನ್ನು ನೋಡಿ) ಆಹಾ ! ಎಂತಹ ಅಪರಂಜಿಯ ನಾಣ್ಯಗಳು ! ಓಹೋ ! ಶ್ರೀರಾಮ ನಾಮವುಳ್ಳ ರಾಮಟೆಂಕಿಯ ವರಹಗಳು !! ಅಯ್ಯೋ ! ಮಹಾತ್ಮರಾದ ಕಬೀರದಾಸರ ಮಹಿಮೆಯನ್ನರಿಯದೆ ನಾನು ಅವರಿಗೆ ದ್ರೋಹಮಾಡಿ ಪರಮ ಪಾಪಿಯಾದೆನು ಅಯ್ಯೊ ! ಆ ಮಾಯಾವಿಯಾದ ಕಾಕೋದರನ ಮಾತಿಗ ಬೆರಗಾಗಿ ನಾನು ಇಂತಹ ಕಾರ್ಯವನ್ನು ಮಾಡಿದೆನಲ್ಲಾ ! ಈ ಪಾಪದಿಂದ ನಾನು ಹೇಗೆ ಮುಕ್ತನಾಗುವೆನು ! (ಬೀಬಿಯನ್ನು ನೋಡಿ) ತಾಯಿಾ ! ನನ್ನ ಸರ್ವಾಪರಾಧಗಳನ್ನು ಮನ್ನಿಸು. ಶರಣಾಗತನಾಗಿರುವೆನು.

**ಬೀಬಿ**—ಶ್ರೀಮಂತರೇ ! ಅಜ್ಞಾನದಿಂದ ನೀವು ಮಾಡಿದ ಅಪರಾಧಕ್ಕಾಗಿ ನೀವು ಮನಸ್ಸು ಕರಗಿ ಪಶ್ಚಾತ್ತಾಪಪಟ್ಟು ಶುದ್ಧರಾಗಿರುವಿರಿ ; ಈಗ ರಾಮೋತ್ಸವವು ಬಹು ವೈಭವದಿಂದ ನಡೆಯುತ್ತಿರುವುದು. ಅಲ್ಲಿ

ಅನೇಕ ಮಹನೀಯರುಗಳಾದ ಭಗವದ್ಭಕ್ತ ಶಿರೋಮಣಿಗಳು ಸೇರಿರುವರು. ನೀವು ಅವರ ಅನುಗ್ರಹವನ್ನು ಪಡೆಯುವುದಾದರೆ ನಿಮಗೆ ಇಹಪರಗಳಲ್ಲಿ ಶ್ರೇಯಸ್ಸುಂಟಾಗುವುದು

ರತ್ನಾಕರ—ಮಾತೇ, ಹಾಗೆಯೇ ಆಗಲಿ ನಿನ್ನ ವಿಷಯದಲ್ಲಿ ನಾನು ಅಜ್ಞಾನದಿಂದ ದುರಾಲೋಚನೆ ಮಾಡಿದುದಕ್ಕಾಗಿ ನನಗೆ ಬಹಳ ವ್ಯಥೆಯುಂಟಾಗಿರುವುದು. ಮಹಾ ಪತಿವ್ರತೆಯಾದ ನಿನ್ನನ್ನು ನಾನು ಒತ್ತೆಗಾಗಿ ತೆಗೆದುಕೊಂಡು ಪರಮ ಪಾತಕಿಯಾದೆನು ನನ್ನನ್ನು ಕ್ಷಮಿಸು ಬಾ! ಈಗಲೇ ನಿನ್ನನ್ನು ಆ ಮಹನೀಯನಾದ ನಿನ್ನ ಪತಿಗೆ ಒಪ್ಪಿಸಿ, ಆತನ ಕ್ಷಮೆಯನ್ನು ಬೇಡಿ ಈ ಧನವನ್ನೂ ಸಹ ರಾಮಸೇವೆಗಾಗಿ ಅರ್ಪಿಸುವೆನು ಬಾ! ಯಾರಲ್ಲಿ? ಲಿಂಗಾ, ನಾನು ಕಬೀರದಾಸರ ರಾಮೋತ್ಸವಕ್ಕೆ ಹೋಗುವೆನು, ಅಲ್ಲಿಗೆ ಈ ಹಣವನ್ನು ತೆಗೆದುಕೊಂಡು ಬಾ.

ಲಿಂಗ—ಅಪ್ಪಣೆ ಬುದ್ಧಿ. (ಹೋಗುವರು.)

ದೃಶ್ಯ ೬ (ಶ್ರೀರಾಮ ದೇವಾಲಯದಲ್ಲಿ ಕಬೀರದಾಸ ಕಮಾಲದಾಸರು ಇತರ ಸಾಧುಗಳೊಡನೆ ಭಜನೆ ಮಾಡುತ್ತಿರುವರು.) ೪೩.

ಮಧುಮೋಹಿನಿ—(ವೈರಾಗಿಣಿಯಾಗಿ ನಿಂತಿರುವಳು.)

ಕಾಕೋದರ—(ಪ್ರವೇಶಿಸಿ ನೋಡಿ) ಎಲ್ಲಿ? ಉತ್ಸವಕ್ಕೆ ರತ್ನಾಕರನಿನ್ನೂ ಬಂದತೆಯಿಲ್ಲ.

ರತ್ನಾಕರ—(ಬೀಬಿಯೊಡನೆ ಪ್ರವೇಶಿಸಿ ಕಬೀರನ ಪಾದಗಳಮೇಲೆ ಬಿದ್ದು.)

ಕಂ|| ಮನ್ನಿಸು ಮಹಾನುಭಾವಾ |
ಸನ್ನುತ ಗುಣಭರಿತ ಪರಮ ನಿರ್ಮಲ ಭಾವಾ ||
ಇನ್ನುರೆ ಶರಣಾಗತನಾ |
ದೆನ್ನಂ ಕರುಣಾಕಟಾಕ್ಷದಿಂ ಪಾಲಿಸು ನೀಂ ||೪೭||

ಕಾಕೋದರ—ಇದೇನು? ಈ ವಿಚಿತ್ರವು!

**ಕಬೀರ**—ಶ್ರೀಮಂತರೇ ಏನಿದು! ಆಶ್ಚರ್ಯವು! ತಾವೀರೀತಿ ಭಯದಿಂದ ಬಂದಿರಲೇನು ಕಾರಣ?

**ರತ್ನಾಕರ**—ಪೂಜ್ಯರೇ! ಮಹಾನುಭಾವರೇ! ನಿಮ್ಮ ಮಹಿಮೆಯನ್ನು ಅರಿಯದೆ ನಾನು ಈಕೆಯನ್ನು ಒತ್ತೆಗಾಗಿ ತೆಗೆದುಕೊಂಡು ತಮಗಪರಾಧವನ್ನು ಮಾಡಿದೆನು. ನನ್ನನ್ನು ಮನ್ನಿಸಿ ಪರಿಶುದ್ಧಳಾದ ಈಕೆಯನ್ನು ತಾವು ಪರಿಗ್ರಹಿಸಿ ನನ್ನನ್ನು ಕೃತಾರ್ಥನನ್ನಾಗ ಮಾಡಬೇಕಾಗಿ ಬೇಡುವೆನು

**ಕಬೀರ**—ರಾಮ! ರಾಮ! ಈಕೆಯನ್ನು ನಿಮ್ಮಲ್ಲಿ ಒತ್ತೆಯಿಟ್ಟಿರುತ್ತೇನೆ. ತಮ್ಮ ಮುನ್ನೂರು ವರಹಗಳನ್ನು ನಾನು ತಂದುಕೊಟ್ಟಮೇಲೆ ಆಕೆಯನ್ನು ನಾನು ಪರಿಗ್ರಹಿಸುವೆನು. ಅವರೆಗೂ ಈಕೆಯನ್ನು ನಾನು ಪರಿಗ್ರಹಿಸಲಾರೆನು, ಕರೆದುಕೊಂಡು ಹೋಗಿ ಕರೆದುಕೊಂಡುಹೋಗಿ.

**ಕಾಕೋದರ**—ನ್ಯಾಯ! ನ್ಯಾಯ!! ಪಾಪ ಸಾಧುಗಳು ಸತ್ಯವಂತರು!

**ರತ್ನಾಕರ**—ಸ್ವಾಮಿಾ! ಮಹನೀಯರೇ! ತಾವು ಕಳುಹಿಸಿದ ಹಣವು ನನಗೆ ಸಂದಿತು

**ಕಬೀರ**—ಏನು! ನಾನು ಕಳುಹಿಸಿಕೊಟ್ಟ ಹಣವೇ? ನಾನು ಹಣವನ್ನು ಕಳುಹಿಸಲೇ ಇಲ್ಲವಲ್ಲಾ!

**ರತ್ನಾಕರ**—ಆರ್ತನಾದ ನನ್ನೊಡನೆ ಪರಿಹಾಸ್ಯ ಮಾಡುವರೇ? ನಗರರಕ್ಷಕನು ತಾವು ಕಳುಹಿಸಿದ ಮುನ್ನೂರು ವರಹಗಳನ್ನು ನನಗೆ ತಂದುಕೊಟ್ಟಿರುವನು. ಇದೋ! ಇದನ್ನೂ ಶ್ರೀರಾಮ ಸೇವೆಗಾಗಿ ತಾವು ಉಪಯೋಗಿಸಿ ತಮ್ಮ ಪತ್ನಿಯನ್ನು ಸ್ವೀಕರಿಸಿ ನನ್ನನ್ನು ಕೃತಕೃತ್ಯನನ್ನಾಗಿ ಮಾಡಬೇಕು. (ಹಣದ ಗಂಟನ್ನು ಕೊಡುವನು.)

**ಕಾಕೋದರ**—(ಭ್ರಾಂತನಾಗಿ ನಿಲ್ಲುವನು.)

**ಕಬೀರ**—ಯಾವ ಗ್ರಾಮ ರಕ್ಷಕನು? ಆತನೆಲ್ಲಿರುವನು?

**ರತ್ನಾಕರ**—(ಸುತ್ತಲೂನೋಡಿ) ನಮ್ಮಹಿಂದೆಯೇ ಬಂದನಲ್ಲಾ! ಎಲ್ಲಿ? ಆತನೆಲ್ಲಿ? ಆಗಲೇ ಮಾಯವಾಗಿರುವನು! ಏನಾಶ್ಚರ್ಯವಿದು!

**ಕಬೀರ**—ನಾನಿದನ್ನು ನಂಬಲಾರೆನು.

ರತ್ನಾಕರ—ಸ್ವಾಮಿ ! ಆತನು ಬಂದು ಹಣವನ್ನು ಕೊಟ್ಟುದನ್ನು ತಮ್ಮ ಪತ್ನಿಯಾದ ಈ ಸಾಧ್ವೀಮಣಿಯೂ ನೋಡಿರುವಳು ; ಆಕೆಯನ್ನೇ ಕೇಳಿ ನಿಜಾಂಶವನ್ನು ತಿಳಿದು ಈಕೆಯನ್ನು ಪರಿಗ್ರಹಿಸಿ, ಈ ಧನವನ್ನೂ ರಾಮ ಸೇವೆಗಾಗಿ ಸ್ವೀಕರಿಸಬೇಕು.

ಕಬೀರ—(ನಾಣ್ಯಗಳನ್ನು ನೋಡಿ) ಆಹಾ ! ರಾಮಟಂಕಿ ವರಹಗಳು ! ಶ್ರೀರಾಮಾ ! ಭಕ್ತವತ್ಸಲಾ !! ನಮಗಾಗಿ ಗ್ರಾಮರಕ್ಷಕನಾಗಿ ಹಣವನ್ನು ಹೊತ್ತುಕೊಂಡು ಹೋಗಿ ಶ್ರೀಮಂತನಿಗೆ ಕೊಟ್ಟವನು ನೀನೇ ! ಪರಮಾತ್ಮಾ ! ನಿನ್ನ ಮಹಿಮೆಯನ್ನೆಷ್ಟೆಂದು ಕೊಂಡಾಡಲಿ !! ಶ್ರೀಮಂತರೇ ! ಶ್ರೀರಾಮಚಂದ್ರನು, ತನ್ನ ಸೇವೆಗಾಗಿ ನೀವು ಹಣವನ್ನು ಕೊಟ್ಟ ಕಾರಣ, ನಿಮಗೆ ನಗರ ರಕ್ಷಕನ ರೂಪದಿಂದ ದರ್ಶನವನ್ನು ಕೊಟ್ಟಿರುವನು. ನೀವೇ ಧನ್ಯರು ! ಪುಣ್ಯವಂತರು ! ನಿಮ್ಮಿಷ್ಟದಂತೆ ನಾವೆಲ್ಲರೂ ರಾಮ ಸೇವೆಯನ್ನು ನಡೆಯಿಸೋಣ.

ರತ್ನಾಕರ—(ಮಧುಮೋಹಿನಿಯನ್ನು ನೋಡಿ) ಅಯ್ಯೋ ! ಮಧುಮೋಹಿನೀಪಿಶಾಚೀ ! (ಕಿರಿಚಿಕೊಳ್ಳುವನು.)

ಕಬೀರ—ಏನಿದು ? ಪಿಶಾಚವೇ ? ಹೀಗೆ ಹೆದರಿ ಕೂಗಿಕೊಳ್ಳುವಿರಿ ? ಪಿಶಾಚವೆಲ್ಲಿರುವುದು ?

ರತ್ನಾಕರ—ಸ್ವಾಮಿ ! (ಮಧುಮೋಹಿನಿಯನ್ನು ತೋರಿಸಿ) ಇದು ಆ ಮಧುಮೋಹಿನಿಯ ಪಿಶಾಚವು ! ನಿಜವಾಗಿಯೂ ಪಿಶಾಚವು !!

ವಿಠಲದಾಸರು— ಅಯ್ಯಾ ! ಈಕೆಯು ಪಿಶಾಚಿಯಲ್ಲ ; ಈಕೆಯೊಬ್ಬ ವಿರಾಗಿಣಿಯು.

ರತ್ನಾಕರ—ನನ್ನ ಕಣ್ಣುಗಳಿಗೆ ಆ ಮಧುಮೋಹಿನಿಯಂತೆ ಕಾಣುತ್ತಿರುವಳಲ್ಲಾ ! ಅಯ್ಯೋ !

ವಿಠಲದಾಸರು—ಮಧುಮೋಹಿನಿಯಾರು ? ಆಕೆಗೂ ನಿನಗೂ ಸಂಬಂಧವೇನು ? ನೀನು ಹೀಗೆ ಭ್ರಾಂತನಾಗಿ ಚಿತ್ತವೈಕಲ್ಯದಿಂದ ಇರಲು ಕಾರಣವೇನು ? ವಿವರವಾಗಿ ತಿಳಿಸು.

ರತ್ನಾಕರ—ಪೂಜ್ಯರೇ ! ತಾವುಗಳೆಲ್ಲರೂ ಮಹಾನುಭಾವರು ; ಪರದೇವತಾಸ್ವರೂಪರು ; ಇದು ಶ್ರೀರಾಮಚಂದ್ರನ ಸನ್ನಿಧಿಯು ; ನನ್ನ ಸರ್ವಾ

ಗರಾಧಗಳನ್ನು ಮನ್ನಿಸಿ ಪಾಲಿಸಬೇಕು. ಎಲ್ಲವನ್ನೂ ವಿಸ್ತರಿಸಿ ವಿಜ್ಞಾಪಿಸಿಕೊಳ್ಳುವೆನು

ಶ್ಯಾಮಲದಾಸರು—ಅಯ್ಯಾ! ಪಾಪವು ಪಶ್ಚಾತ್ತಾಪದಿಂದ ಹೋಗುವುದೆಂಬುದನ್ನು ಕೇಳಿಬಲ್ಲೆಯಷ್ಟೆ! ಅದರಿಂದ ನೀನು ಪಡುತ್ತಿರುವ ಪಶ್ಚಾತ್ತಾಪದಿಂದಲೇ ನೀನು ಶುದ್ಧನಾದೆ; ಹೆದರಬೇಡ, ವಿಷಯವನ್ನು ತಿಳಿಸು.

ರತ್ನಾಕರ—ಪೂಜ್ಯರೇ! ನಾನು "ಮಧುಮೋಹಿನಿ" ಎಂಬ ಸುಂದರಿಯನ್ನು ಬಯಸಿ ತಂತ್ರದಿಂದ ಆಕೆಯನ್ನು ಗಂಡನಿಂದಗಲಿಸಿ ಕೆಲವು ಕಾಲ ಆಕೆಯಲ್ಲಿ ಸ್ನೇಹದಿಂದಿದ್ದೆನು. ಅನಂತರ ಒಂದಾನೊಂದುದಿನ ಗಂಗಾಸ್ನಾನಘಟ್ಟದಲ್ಲಿ ಈ ಕಬೀರದಾಸರ ಪತ್ನಿಯಾದ ಈ ಸಾಧ್ವೀಮಣಿಯನ್ನು ನೋಡಿ ಚಿತ್ತವೈಕಲ್ಯದಿಂದ ಈಕೆಯನ್ನು ಬಯಸಿ ನಾನಾತಂತ್ರಗಳನ್ನು ನಡೆಯಿಸಿದೆನು ಅಲ್ಲದೆ ಈಕೆಯ ಚಿಂತೆಯಲ್ಲಿದ್ದ ನಾನು ಆ ಮಧುಮೋಹಿನಿಯಲ್ಲಿ ಅಸಹ್ಯ ಹುಟ್ಟಿ, ಉದಾಸೀನನಾದೆನು ಅಲ್ಲದೆ ನನ್ನ ಬಳಿಗೆ ಬಂದು ಬಹಳವಾಗಿ ಪ್ರಾರ್ಥಿಸಿ ಕಾಡಿಸಿದ ಆ ಮಧುಮೋಹಿನಿಯನ್ನು ಗಂಗಾನದಿಯಲ್ಲಿ ತಳ್ಳಿಬಿಟ್ಟೆನು ಈ ಸಾಧ್ವಿಯು ಇನ್ನೂ ನನಗೆ ವಶಳಾಗದಿರಲು ಕಡೆಗೆ ನನ್ನ ಮಿತ್ರನಾದ ಕಾಕೋದರನು, ಕಬೀರದಾಸರನ್ನು ಹಣದ ಇಕ್ಕಟ್ಟಿಗೆ ಸಿಕ್ಕಿಸಬೇಕೆಂಬ ಉದ್ದೇಶದಿಂದ ರಾಮೋತ್ಸವಕ್ಕೆ ಬರುವಂತೆ ತಮ್ಮೆಲ್ಲರಿಗೂ, ಈ ಕಬೀರದಾಸರೇ ಬರೆದಂತೆ ಪತ್ರಗಳನ್ನು ಬರೆದು ಕಳುಹಿಸಿದನು. ತಾವು ಬಂದುದನ್ನರಿತು ಕಾಕೋದರನು ದಾಸರಿಗೆ ಹಣವನ್ನು ಕೊಡಿಸುವೆನೆಂದು ಹೇಳಿ ನನ್ನಲ್ಲಿಗೆ ಕರೆತಂದನು. ಆ ನೆಪದಿಂದ ನಾನೀಕೆಯನ್ನು ಇವರಿಂದ ಒತ್ತೆಯಾಗಿ ಪಡೆದು ಈಕೆಯನ್ನು ನನ್ನ ಇಷ್ಟಾನುವರ್ತಿನಿಯಾಗುವಂತೆ ಬಲಾತ್ಕರಿಸಲಾರಂಭಿಸಿದೆನು. ಆಗ ನಾನು ಹಿಂದೆ ಗಂಗೆಯಲ್ಲಿ ನೂಕಿದ್ದ ಮಧುಮೋಹಿನಿಯ ಆಕಾರವು ನನಗೆ ಭಯಂಕರವಾಗಿ ಎಲ್ಲೆಲ್ಲಿಯೂ ಕಾಣಲಾರಂಭವಾಯಿತು. ಅನಂತರ ನನ್ನ ಅಪರಾಧವು ನನ್ನ ಗೋಚರಕ್ಕೆ ಬಂದು, ಈಕೆಗೆ ಶರಣಾಗತನಾಗಿ ಕ್ಷಮೆಯನ್ನು ಬೇಡುತ್ತಿರುವಲ್ಲಿ ನಗರರಕ್ಷಕನು ಹಣವನ್ನು ತಂದು ಕೊಟ್ಟು ಈಕೆಯನ್ನು ತಮ್ಮಲ್ಲಿಗೆ ಕರೆದುಕೊಂಡುಹೋಗಿ ಒಪ್ಪಿಸುವಂತೆ ಹೇಳಿ

ನವನ್ನೊಡನೆ ಇಲ್ಲಿಗೆ ಬರುತ್ತ ಮಾರ್ಗದಲ್ಲಿಯೇ ಮಾಯವಾದನು. ಇದೇ ನನ್ನ ಚರಿತ್ರೆಯು ಈ ಆಕೃತಿಯು ಆ ಮಧುಮೋಹಿನಿಯಂತೆ ಇರುವುದರಿಂದ ನಾನಿದನ್ನು ಪಿಶಾಚವೆಂದು ಭಾವಿಸಿದೆನು. (ಕಬೀರನನ್ನು ನೋಡಿ) ಮಹಾತ್ಮ ಕಬೀರದಾಸರೇ! ಮಹಾಪರಾಧಿಯೂ ಪಾಪಿಯೂ ಆದ ನನ್ನನ್ನು ಮನ್ನಿಸಿ ಪರಿಶುದ್ಧಳಾದ ಈ ಮಹಾಪತಿವ್ರತೆಯನ್ನು ತಾವು ಪರಿಗ್ರಹಿಸಿ ನನ್ನನ್ನುದ್ಧಾರ ಮಾಡಬೇಕು

**ಕಾಕೋದರ**— ಅಯ್ಯೋ! ಈ ದಂಪತಿಗಳ ಮಹಿಮೆಯನ್ನರಿಯದೆ ನಾನಂತಹ ಅಕಾರ್ಯ ಮಾಡಿದೆನು!

**ಕಬೀರ**—ಶ್ರೀಮಂತರೇ! ಆರ್ಯರು ಹೇಳಿದಂತೆ ನಿಮ್ಮ ಪಶ್ಚಾತ್ತಾಪದಿಂದ ನಿಮ್ಮ ಪಾಪವು ನಿವಾರಣೆಯಾಯಿತು; ಅಲ್ಲದೆ ನನ್ನ ಪ್ರಾರ್ಥನೆಯಂತೆ ಈಗ ನೀವು ರಾಮಸೇವೆಗೆ ಹಣವನ್ನು ಕೊಟ್ಟು ಪುಣ್ಯಭಾಗಿಗಳಾದಿರಿ, ನೀವು ಚಿಂತಿಸದೆ ಈ ಮಹನೀಯರ ಆಶೀರ್ವಾದಗಳನ್ನು ಪಡೆದು ರಾಮಸೇವಾಧುರೀಣರಾಗಿರಿ. ನಿಮಗೆ ರಾಮಚಂದ್ರನು ಮಂಗಳವನ್ನುಂಟುಮಾಡುವನು

**ರತ್ನಾಕರ**—ಪೂಜ್ಯರೇ! ಧನ್ಯನಾದೆನು.

**ಶ್ಯಾಮಲದಾಸರು**—ಶ್ರೀಮಂತರೇ! ಅಪರಾಧ ಮಾಡುವುದು ಮನುಷ್ಯಸ್ವಭಾವವು. ಜ್ಞಾನೋದಯದಿಂದ ಅದಕ್ಕೆ ಪಶ್ಚಾತ್ತಾಪಪಟ್ಟು ಚಿಂತಿಸುವುದು ಪುಣ್ಯವಿಶೇಷವು! ಅದರಿಂದ ನಿಮಗೆ ಶ್ರೀರಾಮಚಂದ್ರನು ಮಂಗಳವನ್ನುಂಟುಮಾಡುವನು (ಮಧುಮೋಹಿನಿಯನ್ನು ನೋಡಿ) ಎಲೌ! ವೈರಾಗಿಣೀ! ನಿನ್ನ ಚರಿತ್ರವನ್ನು ಈ ಮಹಾತ್ಮರಿಗೆ ಸಂಕ್ಷೇಪವಾಗಿ ತಿಳಿಸುವುದು ಸಮಯೋಚಿತವಾಗಿದೆ

**ವೈರಾಗಿಣಿ**— ಪೂಜ್ಯರೇ! ಈ ರತ್ನಾಕರನು ಹೇಳಿದಂತೆ ಲಿತನಿಂದ ಗಂಗಾಪ್ರವಾಹದಲ್ಲಿ ನೂಕಲ್ಪಟ್ಟ ಪರಮಪಾತಕಿಯಾದ ಮಧುಮೋಹಿನಿಯು ನಾನೇ. ಪುರುಷಾರ್ಥ ಸಾಧನೆಗಾಗಿ ಕೈವಿಡಿದ ಪತಿಯನ್ನು ಅವಿವೇಕದಿಂದ ವಂಚಿಸಿ, ಪಾಪಪುಣ್ಯವಿವೇಚನೆಯಿಲ್ಲದೆ. ಫಲಾಫಲಗಳ ದೃಷ್ಟಿಯಿಲ್ಲದೆ, ಕೃತ್ಯಾಕೃತ್ಯಗಳನ್ನು ನೋಡದೆ, ಧರ್ಮಾಧರ್ಮಗಳ ಮರ್ಮವನ್ನರಿಯದೆ, ವಿಚಾರಶೂನ್ಯಳಾಗಿ ಕಾಮಾಂಧಕಾರದಲ್ಲಿ ಬಿದ್ದು, ರೂಪಯೌವನ ಧನಾಶೆಗಳಲ್ಲಿ ಮುಳುಗಿ, ಈ ರತ್ನಾಕರನ ಮತ್ತು ಇವನ

ಮಿತ್ರನಾದ ಕಾಕೋದರನ ಮಾತುಗಳಿಗೆ ಬೆರಗಾಗಿ ಈತನ ಬಲೆಗೆ ಬಿದ್ದೆನು. ಕಡೆಗೂ ಈತನಿಂದಲೇ ಮರಣಾವಸ್ಥೆಗೆ ಬಂದು, ಇಹಪರಗಳನ್ನು ಕಳೆದು ಭ್ರಷ್ಟಳಾದ ಈ ನನ್ನ ಜನ್ಮವು ನೀಚವಾದದ್ದು! ತುಚ್ಛವಾದದ್ದು! ಅಯ್ಯೋ! ದುರ್ವರ್ತನದಿಂದ ನನ್ನ ಉಭಯ ಕುಲಗಳನ್ನೂ ಅಪರಿಶುದ್ಧಮಾಡಿದೆನು, ನರಕಕ್ಕೆ ತಳ್ಳಿದೆನು, ವಂಶಘಾತಿನಿಯಾದೆನು; ಲೋಕದಲ್ಲಿ ಕಳಂಕಿತೆಯಾದೆನು ಗಂಗಾಪ್ರವಾಹದಲ್ಲಿ ಕೊಚ್ಚಿಹೋಗುತ್ತಿದ್ದ ನನ್ನನ್ನು ಈ ಸಾಧುಮಹನೀಯರು ಕರುಣದಿಂದ ಮೇಲಕ್ಕೆತ್ತಿ ತಮ್ಮ ದಿವ್ಯೋಪದೇಶದಿಂದ ನನ್ನನ್ನು ಈರೀತಿ ಭಕ್ತಿಮಾರ್ಗಕ್ಕೆ ತಂದು ಉದ್ಧರಿಸಿದರು. ಆಹಾ! ಲೋಕದಲ್ಲಿ ಪತಿಯೇ ದೈವವೆಂದು ನಂಬಿ ಆತನು ಕುರೂಪಿಯಾಗಲಿ, ಸುರೂಪಿಯಾಗಲಿ, ಲಕ್ಷಾಧಿಪತಿಯಾಗಲಿ, ಭಿಕ್ಷುಕನಾಗಲಿ, ವಿದ್ಯಾವಂತನಾಗಲಿ, ಅವಿದ್ಯಾವಂತನಾಗಲಿ ಅವನೇ ದೈವವು, ಅವನೇ ಗುರುವು ಅವನೇ ಸಮಸ್ತವು, ಎಂದು ತಿಳಿದು ನಿಶ್ಚಲ ಭಕ್ತಿಯಿಂದ ಪತಿಸೇವೆ ಮಾಡಿಕೊಂಡಿರುವ ಸಾಧ್ವಿಯೇ ಪರಿಶುದ್ಧಳು! ಪೂಜ್ಯಳು, ಪುಣ್ಯದಂತಳು, ಭಾಗ್ಯವಂತಳು, ಸತ್ಯವಂತಳು, ಕೀರ್ತಿವಂತಳು, ಪರಮಾತ್ಮನ ಕೃಪೆಗೆ ಪಾತ್ರಳು, ಲಕ್ಷ್ಮೀಸ್ವರೂಪಳು; ಆದಕಾರಣ ಧನ ಯೌವನ ಮದದಿಂದಲೂ, ಚಿತ್ತಚಾಪಲ್ಯದಿಂದಲೂ ಕಾಮಪಿಶಾಚದ ಕೈಗೆ ಸಿಕ್ಕದೆ ಪತಿಸೇವಾಧುರೀಣೆಯರಾಗಿ ಮಹಿಳೆಯರು ಶ್ರೀರಾಮನನುಗ್ರಹವನ್ನು ಪಡೆದು ನಿತ್ಯಾನಂದದಿಂದ ಬಾಳಲಿ; ನಿಮ್ಮ ಸನ್ನಿಧಿಯ ದಾಸಿಯಾಗಿರುವ ಈ ಮಧುಮೋಹಿನಿಯ ಈ ಪಶ್ಚಾತ್ತಾಪವನ್ನು ಲಾಲಿಸಿ ನನ್ನ ಪಾಪವು ನಿವಾರಣೆಯಾಗುವಂತೆ ವರವನ್ನು ಅನುಗ್ರಹಿಸಬೇಕಾಗಿ ತಮ್ಮ ಪಾದಸನ್ನಿಧಿಯಲ್ಲಿ ಶರಣಾಗತಳಾಗಿ ಬೇಡಿಕೊಳ್ಳುತ್ತಿರುವೆನು.

ರತ್ನಾಕರ—ಮಧುಮೋಹಿನೀ! ಪರಮಪಾಪಿಯಾದ ಈ ರತ್ನಾಕರನನ್ನು ಮನ್ನಿಸು, ಮನ್ನಿಸು! ಇನ್ನು ನಾನೂ ನಿನ್ನಂತೆಯೇ ಸಾಧುಸೇವೆಯಿಂದಿರುವೆನು. (ಎಲ್ಲರಿಗೂ ನಮಸ್ಕರಿಸಿ) ಮಹಾತ್ಮರು ನೆರೆದಿರುವ ಈ ದೇವತಾಸನ್ನಿಧಿಯೇ ಭೂವೈಕುಂಠವು; ಇಲ್ಲಿ ನನ್ನ ಪಾಪಗಳಿಗಾಗಿ ಪಶ್ಚಾತ್ತಾಪಪಟ್ಟು ಕ್ಷಮೆಯನ್ನು ಬೇಡಿಕೊಂಡಿರುವೆನು.

ಪಾಪಹರನಾದ ಶ್ರೀ ರಾಮಚಂದ್ರನೇ! ಪಾವನಮೂರ್ತಿಗಳಾದ ಸಾಧು ಗಳೇ! ನನ್ನನ್ನು ಮನ್ನಿಸಿ ಪಾಲಿಸಿ.

**ಕಾಕೋದರ**—(ಕಬೀರನಿಗೆ ನಮಸ್ಕರಿಸಿ) ಪೂಜ್ಯರಾದ ಕಬೀರದಾಸರೇ, ನಿಮ್ಮ ಮಹಿಮೆಯನ್ನರಿಯದೆ, ಹಾಳುಹಣದಾಸೆಯಿಂದ ಪಾಪಪುಣ್ಯ ವಿವೇಚನೆಯಿಲ್ಲದೆ, ರತ್ನಾಕರನನ್ನು ದುರ್ಮಾರ್ಗಕ್ಕೆಳೆದು ಇಷ್ಟು ಅನರ್ಥಗಳನ್ನು ನಡೆಯಿಸಿದ ಪರಮಪಾಪಿಯು ನಾನೇ! ನನ್ನ ಮಹಾ ಪರಾಧಕ್ಕೆ ತಾವು ನನಗೆ ಯಾವ ಶಿಕ್ಷೆಯನ್ನಾದರೂ ವಿಧಿಸಬಹುದು. ಇನ್ನು ನನ್ನ ಸರ್ವಸ್ವವನ್ನೂ ಶ್ರೀರಾಮ ಸೇವೆಗೆ ಅರ್ಪಿಸುವೆನು; ಅದನ್ನು ಸ್ವೀಕರಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕು. (ಸಾಧುಗಳನ್ನು ನೋಡಿ) ಪೂಜ್ಯರಾದ ಸಾಧುಮಹನೀಯರೇ! ಪರಮ ಪಾಪಿಯಾದ ಈ ಕಾಕೋದರನನ್ನು ಅನುಗ್ರಹಿಸಿ ಕಾಪಾಡಬೇಕು.

(ನಮಸ್ಕರಿಸುವನು)

**ಕಬೀರ**—ಸ್ವಾಮಿ! ತಾವು ಯಾವ ಅನರ್ಥವನ್ನೂ ನಡೆಯಿಸಲಿಲ್ಲ. ತಮ್ಮ ಕಾರ್ಯಗಳೆಲ್ಲವೂ ಮಂಗಳಕರವಾಗಿಯೇ ಪರ್ಯವಸಾನವನ್ನು ಹೊಂದಿರು ವವು. ನಮಗೆ ಇಷ್ಟುಮಂದಿ ಸಾಧುಗಳ ಸಂದರ್ಶನಾನಂದವನ್ನೂ ಶ್ರೀರಾಮಸೇವೆಯನ್ನೂ ಶ್ರೀರಾಮನನುಗ್ರಹವನ್ನೂ ಒದಗಿಸಲು ತಾವೇ ಮುಖ್ಯಕಾರಣರೆಂದು ತಿಳಿದಕಾರಣ ತಮಗೆ ನಾನು ಕೃತಜ್ಞನಾ ಗಿರುವೆನು ತಾವು ಚಿಂತಿಸಬಾರದು. ತಾವೂ ನಮ್ಮೊಡನೆ ಉತ್ಸವದಲ್ಲಿ ಸೇರಿದುದು ಬಹಳ ಸಂತೋಷ.

**ಸಾಧುಗಳು**— ರತ್ನಾಕರಾ, ವಿರಾಗಿಣೀ, ಕಾಕೋದರಾ! ನಿಮ್ಮ ಪಾಪ ಗಳು ಪಶ್ಚಾತ್ತಾಪದಿಂದ ನಿವಾರಣೆಯಾಗಿರುವುವು. ನೀವು ಚಿಂತಿಸ ಬೇಡಿ.

**ರತ್ನಾಕರ-ವಿರಾಗಿಣಿ-ಕಾಕೋದರ**—ಧನ್ಯರಾದೆವು.

**ಕಬೀರದಾಸ**—ಉತ್ಸವಾರಂಭದಲ್ಲಿ ನಮ್ಮೆಲ್ಲರಿಗೂ ಕುಶಲವನ್ನಿತ್ತಿರುವ ಪರಮಾತ್ಮನಾದ ಶ್ರೀರಾಮಚಂದ್ರನನ್ನು ಎಲ್ಲರೂ ಆರಾಧಿಸಿ ಸ್ತುತಿ ಸೋಣ.

ಎಲ್ಲರೂ— ‖ ಮಂದಾನಿಲ ರಗಳೆ ‖
ಶ್ರೀವನರಾಶಿ ನಿಕೇತನ ರಾಮ । ಸೇಂತ ಪದ್ಮ ನಿಕೇತನ ರಾಮ ‖
ಕೌಸಲ್ಯಾ ಪ್ರಿಯ ಬಾಲಕ ರಾಮಾ । ಕೌಶಿಕಮುಖ ಪರಿಪಾಲಕ ರಾಮ ‖
ಧರಣಿ ಸುತಾಹೃದ್ರಂಜನ ರಾಮ । ಪರಶುರಾಮ ಮದ ಭಂಜನ ರಾಮ ‖
ಜನಕ ದಶರಥ ಮುದಾಕರ ರಾಮ । ಜನಹೃದ್ವನಧಿ ಸುಧಾಕರ ರಾಮ ‖
ಸೀತಾಲಕ್ಷ್ಮಣ ಸಂಯುತ ರಾಮ । ಪೂತಮುನೀಶ್ವರ ಸನ್ನುತ ರಾಮ ‖
ಘನವನವಾಸ ಪ್ರಸ್ಥಿತ ರಾಮ । ಅನಿಶ ವಿಚಿಂತಿತ ದಶರಥ ರಾಮ ‖
ಅನುಜಾರ್ಚಿತ ನಿಜಪಾದುಕ ರಾಮ । ಮುನಿಸಂಕುಲ ಸಮ್ಮೋದಕ ರಾಮ ‖
ವರಪಂಚವಟೀ ಮಂದಿರ ರಾಮ । ಖರಶೂರ್ಪಣಖಾ ಮದಹರ ರಾಮ ‖
ಮಾರೀಚ ಮಹಾಸುರವಧ ರಾಮ । ಧೀರಜಟಾಯು ಗತಿಪ್ರದ ರಾಮ ‖
ಸೀತಾನ್ವೇಷಣ ಕೌತುಕ ರಾಮ । ದೈತ್ಯ ಕಬಂಧ ಚ್ಛೇದಕ ರಾಮ ‖
ಜ್ಞಾನಿಮರುತ್ಸುತ ಸಮ್ಮದ ರಾಮ । ಮಾನಿತ ಸುಗ್ರೀವೇಷ್ಟದ ರಾಮ ‖
ನಿರುಪಮ ಕಪಿಬಲ ಸೇವಿತ ರಾಮ । ವರಚೂಡಾಮಣಿ ಹರ್ಷಿತ ರಾಮ ‖
ಸಾಗರಸೇತು ನಿಬಂಧನ ರಾಮ । ರಾಘವ ರಾವಣಭಂಜನ ರಾಮ ‖
ಸೀತಾಲಾಭ ಶುಭಾನ್ವಿತ ರಾಮ । ತಾತದಶರಥ ನಿರೀಕ್ಷಿತ ರಾಮ ‖
ಭರತಾನಂದಕ ಭವಹರ ರಾಮ । ವರರತ್ನಾಸನ ಸುರುಚಿರ ರಾಮ ‖
ಘನಪಟ್ಟಾಲಂಕೃತ ರಘು ರಾಮ । ಜನನಾಥ ಕುಲಸ್ತುತ ಜಯ ರಾಮ ‖
ಸತ್ಯಾನಂದ ಸುಖಾಕೃತಿ ರಾಮ । ನಿತ್ಯನಿರಂಜನ ಸದ್ಗತಿಧಾಮ ‖
ಅಮರಾವಳಿ ವರ್ಷಿತ ಸುಮ ರಾಮ । ಸುಮನೋಗಣನುತ ಸುಂದರರಾಮ ‖
ಪ್ರಕಟಿತ ದಾನವಶಿಕ್ಷಕ ರಾಮ । ಸಕಲ ಚರಾಚರ ರಕ್ಷಕ ರಾಮ ‖
ಜಗದೇಕ ಮನೋಹರ ರಘುರಾಮ । ನಿಗಮಸ್ತುತ ಗುಣಭಾಸುರ ರಾಮ ‖
ಮಂಗಳಮಖಿಲ ಚಿದಾತ್ಮಕ ರಾಮ । ಮಂಗಳಮತುಳ ಶುಭಾನ್ವಿತ ರಾಮ ‖
ಮಂಗಳ ಮನುಪಮ ಮಹಿಮಾರಾಮ । ಮಂಗಳ ಮಾಶ್ರಿತ ಸುರಕುಜರಾಮ ‖
ಮಂಗಳ ಮುಜ್ವಲ ತೇಜೋಧಾಮ । ಮಂಗಳ ಮಾನಂದಾರ್ಣವ ರಾಮ ‖
ಜಯ ನರಹರಿನುತ ಮಂಗಳನಾಮ । ಜಯನರಹರಿ ದಿವ್ಯಾಕೃತಿ ರಾಮ ‖

(ಪುಷ್ಪಾಂಜಲಿಯಿಂದ ಪೂಜಿಸುವರು.)

ತೃತೀಯಾಂಕಂ ಸಂಪೂರ್ಣ.

ಕಬೀರದಾಸ ನಾಟಕಂ ಸಂಪೂರ್ಣಂ.



# ಮಹಾತ್ಮ ಕಬೀರದಾಸ ನಾಟಕಂ.

## ( ಅ ನು ಬಂ ಧ. )

---

### ನಾಂದಿ.

**ಪುಟ ೧** ರಾಗ—ಕೇತಾ[illegible]—ರೂಪಕತಾಳ.

(ಸಮಯಮಿದೇ ನನುಬ್ರೋವ)

**ಸೂತ್ರಧಾರ**—ತರಣಿ ಕುಲಾಂಬುಧಿ ಚಂದ್ರ । ತಾರಕ ಸ್ವರೂಪ ಪಾಹಿ ॥ಪ॥

ಧರಣಿಜಾ ಮನೋರಮಣ । ದರಹಸನೋಜ್ವಲ ವದನ ॥ಅ॥

ತ್ರಿಗುಣರೂಪ ನಿಗಮಾಗಮಗೀತ ಮನೋಹರಲೀಲ । ಅಗಣಿತಾರುಣ ಪ್ರಭ । ಖಗಸುರಕುಲಪೂಜಿತಶ್ರೀ ॥ ಜಗದಧೀಶ ವಿಜಿತಪಾಶ । ನಗಭವೇಶ ಚಾಪಹರ । ವಿಗತಕೋಪ ವಿಶ್ವರೂಪ । ರಘುಕುಲೇಶ ನೃಹರಿ ರಾಮ ॥ ೧ ॥

**ಪುಟ ೪** ೨ ರಾಗ—ಜಂಜೂಟಿ—ಆದಿತಾಳ

**ನಟಿ**—ಏಪರಿ: ಮೋದವಿದಾವುದು । ಭೂದೇವಿಗಾನಂದ । ಮಾದೀವಸಂತ ॥ಪ॥

ಈ ಮಹಿಯೊಳು ಜನ । ಸ್ತೋಮ ಮದೆಲ್ಲಿಯೂ ॥ ರಾಮೋತ್ಸವಂಗಳೊ । ಳಾಮೋದದಿರಲು ॥ ೧ ॥ ಮಂಗಳವಾದ್ಯದೆ । ಸಂಗೀತನಾಟ್ಯದೆ । ತುಂಗಾನಂದವು ಜನ । ಸಂಘಕೆ ಮೆರೆಯೆ ॥ ೨ ॥

## ಪ್ರಥಮಾಂಕಂ

**ಪುಟ ೫** ೩ ರಾಗ-ಕಲ್ಯಾಣಿ—ರೂಪಕತಾಳ (ನಿತ್ಯಕಲ್ಯಾಣಿ)

**ಶ್ರೀರಾಮ**—ಮಾಯಾಪ್ರಪಂಚವಿದು । ಮನದಂತಲೀಲಾಮಯ ॥ ಪ ॥

ಛಾಯಾ ಮಾತ್ರವಿಲಾಸಂ । ಚಪಲವೈಭವ ಭರಿತ ಮಾಘನಮಾಯಾ ॥ಅ॥

ಈ ಭವದ ವೈ । ಭವದ ಸಂ । ಭವಮತಿತರಳವು ॥ ಭವಾಂತರದೊ

ಳುಪಾರ್ಜಿಸಿದ! ವಿವೇಕಮತಿ ಸುಕರ್ಮಫಲ । ವಿವಿಧಜಂತು । ನಿವಹಮಿಂ-
ತು । ಭವಗಳನನು । ಭವಿಸುತ ಲಿಹ ॥ ೧ ॥

ಪುಟ ೬ ೪ ರಾಗ-ಅಸಾವೇರಿ—ಆದಿತಾಳ.

ಸುಂದರಬಿ—ದೇವದೇವ್ಯ್ರೀವಿಲಾಸ ಮಹಿತ । ದೈವಾಹತಳಾದೆ ॥ ಪ ॥
ಜೀವನಾಧಾರ ಹೀನಸಂಸಾರ । ಭಾವಿಸೆ ಘೋರ ಚಿಂತಾಗಾರ ॥ ೧ ॥
ಜಾನಕೀಲೋಲಾ । ಮಾನಿತಶೀಲ । ದೀನರಾದೆಮ್ಮೊಳದೇನಿಂತುಛಲ ॥೨॥

ಪುಟ ೭ ೫ ರಾಗ-ಬೇಹಾಗ್—ಆದಿತಾಳ

ಕಬೀರ—ರಾಮ ಭಜನಾನಂದವು । ಸುಖಸಾರವು ॥ ಪ ॥
ರಾಮ ಚರಣಯುಗ । ತಾಮರಸ ಸ್ತುತಿ । ಕಾಮಮೋಕ್ಷ ಪ್ರದವು । ಶ್ರೀ
ಮನೋಹರ ॥ ೧ ॥ ಮಧುರಸ ರುಚಿಯಿಂ । ಮಧುರವಿದಲ್ಲವೇ । ಮಧು
ವೈರಿಯ ನಾಮಂ । ಸುಧೀಜಾಲಕೆ ॥ ೨ ॥ ಪಾಪದಹನ ವರ । ತಾಪಸ
ಶರಣ ಸಂ ।।ತಾಪಹರಣ ನಿಪುಣಂ । ಸುಪದ ಪ್ರದಂ ॥ ೩ ॥ ಪರಸುಖ
ದಾತನ । ಪರಮಪಾವನನ । ನರಹರಿಯತುಳಶ್ರೀ । ಕರಮಾಗಿರುವ ॥ ೪ ॥

ಪುಟ ೧೦ ೬ ರಾಗ—ಆದಿತಾಳ

ಶ್ರೀರಾಮ—ನರನ । ಕಾಯವು ಸ್ಥಿರವಲ್ಲ ॥ ಪ ॥
ನ್ಯಾಯದ ಪಥದೊಳು ಪರಿಕಿಸೆ ನರನ ॥ ಅ ॥
ನಾನಾ ಸುಖವನ್ನು ! ಜಗದೊಳು । ತಾನುರೆ ಭೋಗಿಸಲೇನುಫಲವದೀ ।
ಕಾಯವು ॥ ೧ ॥ ಪಾಪಾಕರಕಾರ್ಯ । ವಿರಚಿಸಿ । ತಾಪವನಾಂಪರು ಕಾಪುರು
ಷರುತಾಂ ಕಾಯವು ॥೨॥ ಲೋಕಾಂತರ ಸೌಖ್ಯ।ಪಡೆಯಲು । ಏಕಮನದೆ
ಸುವಿವೇಕಿಗಳಿಹರು ಕಾಯವು ॥ ೩ ॥

ಪುಟ ೧೦ ೭ ರಾಗ-ಕಲ್ಯಾಣಿ—ಆದಿತಾಳ

ಕಬೀರ—ರಾಮ ತೋರು ಮುಖವಂ ಶ್ರೀರಘು । ರಾಮ ॥ ಪ ॥
ನೀಂ ಸುಖವಂ ಸದಾ ಕರುಣಿಪುದು ಸೀ-ತಾ ॥ ಅ ॥
ಪೊಳೆವ ಮಿಂಚಿನಂ । ತಲಘುಕಾಂತಿಯಿಂ । ತೊಳಗಿ ನನಗೆ ಕಂ। ಗೊಳಿಸಿ
ನಿಮಿಷದೊಳ್ ॥ ಚಲಿಸೀಪರಿ ನೀಂ ಮರೆಯಾಗಿರುವ । ಛಲವಿದೇನು
ಮಂಗಳಕರ ಶ್ರೀರಘು ॥ ೧ ॥ ಕಲುಷಭರಿತಸಂಸಾರ ಜಲಧಿಯೊಳ್ ।

ಮುಳುಗಿ ಬಳಲಿ ನಾಂ ತೊಳಲುತಳಲುತೆ || ಕಳವಳಿಸಿಹೆನಾಂ ಕರವಿಡಿದೊ
ಲವಿಂ | ಸಲಹಲೇಕೆ ಸಂದೇಹವು ನರಹರಿರಾಮ || ೨ ||

ಪುಟ ೧೪. ೮. ರಾಗ-ತೋಡಿ—ಆದಿತಾಳ.

ರತ್ನಾಕರ—ಮನೋ ವಿನೋದಕೀಗ | ಸರಾಗ ಸುಯೋಗ || ಪ ||
ಶೃಂಗಾರ ಸಾರ ತ | ರಂಗ ವಿಹಾರ ಸಾ |
ರಂಗಾಕ್ಷಿಯರಾ ಅ | ಪಾಂಗವಿಚಾರ || ಅ ||
ಕಾಂತೆಯರ ನೋಡಿ | ಸಂತಸವ ಕೂಡಿ |
ಕಂತು ಲೀಲೆಯಾಡಿ ಮನ | ಶ್ರಾಂತಿಯನ್ನು ತಾಳುವ || ೧ ||

ಪುಟ ೧೫ ೯ ರಾಗ-ಬೇಹಾಗ್—ಆದಿತಾಳ

ರತ್ನಾಕರ—ವಾರಿಜದಂದವ | ವಾರಿಪುದೀ ಮುಖ |
ಯಾರಿವಳೀ ನವಮೋಹಿನಿಯು || ಪ ||
ಓರೆ ನೋಟಂಗಳು | ಮಾರಶರಂಗಳ |
ವಾರವ ನೀಪರಿ | ಬೀರುತಿರೆ || ಅ ||
ಕಳಕಳಿಸುವ ಮುಖ | ದೆಳೆನಗೆಯಾ ತುಟಿ | ಗಳ ನವಸುಧೆಯನು ಪೀರು
ತಲಿ || ಕಲಿತ ಕಳಾ ಕೌ | ಶಲವನು ತೋರುತೆ | ಲಲನಾಮಣಿಯೊಳಾಂ
ಸುಖಿಸುವೆನೇ || ೧ || ಚಿತ್ತವನುರೆ ತ | ನ್ನತ್ತಲೆ ಸೆಳೆವಳು | ಚಿತ್ರಜಾ
ತನವಮೋಹಿನಿಯು || ಎತ್ತಿ ಪಿಡಿದು ಶತ | ಪತ್ರದಳಾಕ್ಷಿಯು | ಚಿತ್ತ
ಭವನನಾಂ ಸೋಲಿಪೆನೇ || ೨ ||

ಪುಟ ೨೧ ೧೦ ರಾಗ-ದೇಶಿತೋಡಿ—ರೂಪಕತಾಳ

ಕಬೀರ—ಯಾರಿದನು ಕೊಳ್ವಿರೈ | ಸಾರ ಸುಗುಣವಂತರೇ || ಪ ||
ಮಾಳುವೆ ವಸ್ತ್ರವ | ಭರದಿ ಧನಾಢ್ಯರೇ || ಅ ||
ಲಲಿತ ತಂತುಜಾಲ | ಕಲಿತ ನವದುಕೂಲ || ಒಲಿದು ಪರಿಕಿಸುತೆ |
ಬೆಲೆಯ ಕಟ್ಟುತಲೀಗ || ತೊಳಪ ವಸನವನು ಕೊಳ್ಳುದೈ || ೧ ||

ಪುಟ ೨೩ ೧೧ ರಾಗ—ತಾಳ

ವೃದ್ಧಬ್ರಾಹ್ಮಣ—ಆಕಟಾ | ತಾಳುವೆನದೆಂತು ಚಳಿಯ |
ಪಾಲಿಪುದೈ ದೇವ || ಪ ||
ಓ | ಜಗನ್ನಾಥಾ | ಜಯಖ್ಯಾತಾ | ಜರಾತೀತ | ಪೂತ ಪಾಲಿಪು || ೧ ||
ಓ | ದಯಾಶೀಲ | ಧರಾಪಾಲ | ದಮಿತಕಾಲ | ಪಾಲ | ಪಾಲಿಪು ||೨||

ಪುಟ ೨೪ ೧೨ ರಾಗ-ದೇಶಿತೋಡಿ—ತಾಳ

ಕಬೀರ—ಶ್ರೀ ರಘುಕುಲ ಚಂದ್ರ । ಪರಮ ಗುಣ ಸಾಂದ್ರ ॥ ಪ ॥
ವೈರಿ ಗಜ ಮೃಗೇಂದ್ರ । ಚರಣ ವಿನತೇಂದ್ರ ॥ ಅ ॥
ಇನಕುಲಾಲಂಕಾರ । ಘನ ಕಲಾ ಶೃಂಗಾರ ॥ ಮನುಜಾವತಾರ ಶ್ರೀ ಜನ
ಕಜಾಧಾರ ॥ ೧ ॥ ಗಿರಿಶ ಚಾಪ ವಿಭಂಗ ॥ ಕರುಣಾಂಚಿತಾ ಪಾಂಗ ॥
ಚರಣನತ ಸುರ ಸಂಘ । ಚಾರು ನೀಲಾಂಗ ॥ ೨ ॥

ಪುಟ ೩೪ ೧೩ ರಾ-ಮೋಹನ—ಆದಿತಾಳ

ಕಬೀರ—ದಶರಥ ಬಾಲ - ದಾನವ ಕಾಲ ॥ ಪ ॥
ಶಶಿಹಾಸ ಕಲಾ - ಭೂಪಾಲ ಜಯ ॥ ಅ ॥
ದೀನನಾಥ । ಮೌನಿ ಜನ ನುತ । ವಿನಯಗುಣಯುತ । ಧ್ಯಾನನಿರತ
ಹಿತ ॥ ಘನತರ ಚಾರಿತ । ಜ್ಞಾನದಾತ ಶ್ರೀ । ಜಾನಕೀ ಸಹಿತ । ಶ್ರೀ
ಕಾಂತ ಜಯ ॥ ೧ ॥ ದೇವದೇವ । ಶ್ರೀವಿರಾಜಿತ । ನವ ವಿಭವಯುತ ।
ನಾಕಿ ಸನ್ನುತ ॥ ಭುವನ ಸಮಾಶ್ರಿತ । ಭೂತಿದಾನ ಪ್ರಭಾವ ನರಹರಿ
ಶ್ರೀರಾಮ ಜಯ ॥ ೨ ॥

ಪುಟ ೩೪ ೧೪ ರಾಗ—ತಾಳ

ಕಬೀರ—ಇದೇಂ ವಿಚಿತ್ರ ಮಾನಿನೀ । ಮದೇಭ ಮಂಜುಗಾಮಿನೀ ॥ ಪ ॥
ದತ್ತಾಪ ಹಾರವು । ಮುತ್ತುತೆ ಸಮ್ಮನು ।
ಚಿತ್ತವ ತಾಂ ಬಿಡ । ದೊತ್ತುವುದಕ್ಕಟಾ ॥ ಅ ॥
ಭಾಸುರ ವಸ್ತ್ರವಂ । ಭೂಸುರವರ್ಯಗೆ । ಲೇಸೆನೆ ನೀಡಿದೆ । ಕ್ಲೇಶವ
ನೀಗಿದೆ ॥ ೧ ॥ ಏತಕೆ ನೀನಿದ । ನಾತನಿಂ ತಂದಿಹೆ । ಈತೆರ ಮಾಳ್ಪುದು ।
ಪಾತಕ ಮಲ್ಲವೇ ॥ ೨ ॥

ಪುಟ ೩೫ ೧೫ ರಾಗ— ತಾಳ

(ಒಳಗೆ) ಕಮಾಲ್‌ದಾಸ—ಕರುಣಿಸು ಕಮಲಾ ವಿಲಾಸ । ಜಗದೀಶ ॥ ಪ ॥
ಕಲಾ ವಿಚಾರ । ಘನಾ ಚಲಧರ । ಶ್ರೀಶ । ಜಗದೀಶ ॥ ಅ ॥
ಪರೇಶ । ಧರೇಶ । ಸುರೇಶಾದಿ ವಂದ್ಯ । ಸರೋಜ ಸದನಾರಾಧ್ಯ ॥ ದುರಂತ
ರಿಪುಸಂ । ಹರಣ ವಿನೋದ । ಚರಾಚರಾತ್ಮಕ ಶ್ರೀಶ ಜಗದೀಶ ॥

ಪುಟ ೩೭ ೧೬ ರಾಗ-ಬೇಹಾಗ್—ಆದಿತಾಳ

ಮೂರು—ರಾಮರಾಮ ರವಿಕೋಟಿ ಕಳಾಮಯ । ರಾಮ ರಾಮವಿಜಯ॥
ರಾಮರಾಮ ರಘುವಂಶ ಶುಭೋದಯ ।
ರಾಮರಾಮ ಸದಯ ಜಯಜಯ ॥ ಅ ॥
ನಿತ್ಯ ನಿರ್ಮಲಾಕಾರ ನಿರಂಜನ ನೀರದಾಭನೀಲ ॥ ಸತ್ಯರೂಪ ಸರ್ವಾತ್ಮಕ ಜಯಜಯ ಸದಾನಂದಲೋಲ । ಜಯಜಯ ॥ ೧ ॥ ಗೌತಮಾದಿ ಮುನಿ ಸೇವಿತ ಪದಯುಗ । ಪಾತಕಾಳಿ ಹರಣ ॥ ಖ್ಯಾತಿಪೂರ್ಣ ಪರಮಾತ್ಮ ನಿರಾಮಯ । ಭೂತಿದಾನ ಕರುಣ ॥ ಜಯಜಯ ॥ ೨ ॥

## ದ್ವಿತೀಯಾಂಕಂ

ಪುಟ ೩೮ ೧೭ ರಾ-ಜಂಜೂಟಿ—ಆದಿತಾಳ.

ಮಧುಮೋಹಿನಿ—ಏತಕೆ ಬಾರದೆ ನಿಂತ । ಕಾಂತ ॥ ಪ ॥
ಆತನ ಭಾವ । ವೇತೆರ ನಾದುದೋ ॥ ಅ ॥
ಮುದದಿ ನನ್ನ । ಸದನಕವನು । ಪದವನಿಡದ । ನಿಧವದೇನೋ ॥೧॥
ನೀರ ನಿಂತು । ಬಾರನಕಟಾ , ಮಾರನು ಶರವ । ಬೀರುತಿರುವ ॥ ೨ ॥

ಪುಟ ೩೯ ೧೮ ರಾಗ-ಮೋಹನ — ಆದಿತಾಳ

ರತ್ನಾಕರ—ಮಾರನೆ ಸುಮಶರ ನಿಕರದೊ । ಳಿಂಪ್ರದು ತರವೆ ।
ವಿರಹಿಜನ ಹೃದಯ ವಿದಾರನೆ ॥ ಪ ॥
ತಾಪಮೇರೆ ಮೀರೆ । ಅಳಿನಿಕರ ಚಿಕುರೆ । ಪ್ರೇಮ ಕುಡಿ ನೋಟ । ದೊಳಗೆ ಮಾರ । ನಲಗಬೀರಿ । ಮದೀಯ ಹೃದಯವ । ಭ್ರಾಂತಿ ಗೈದು ನಿಂತಳಮಮ ॥ ೧ ॥

ಪುಟ ೪೬ ೧೯ ರಾಗ-ಬೇಹಾಗ್—ಆದಿತಾಳ

ಕಬೀರ-ಬೀಬಿ ಮತ್ತು ಕಮಾಲ — ರಾಮರಾಮ ರವಿಕೋಟಿ ಕಳಾಮಯ। ರಾಮ ದೈತ್ಯ ವಿಜಯ ॥ ಪ ॥ ರಾಮರಾಮ ರಘುವಂಶ ಶುಭೋದಯ । ರಾಮ ರಾಮ ಸದಯ ಜಯಜಯ ॥ ಅ ॥

ಪಂಚಭೂತಮಯ ಪಾವನಚಿನ್ಮಯ | ಪರಂಜ್ಯೋತಿ ರೂಪ || ಸಂಚಿ
ತಾಘ ಕುಲ ಸಂಹರಣ ಕ್ಷಮ | ಸರ್ವಲೋಕ ದೀಪ || ಜಯಜಯ ||೧||
ದಯಾಪೂರ್ಣ ಸದಪಾಂಗ ಮನೋಹರ | ಪಯೋಜಾತ ನೇತ್ರ || ಜಯಾ
ನಂದ ನಿಲಯಾನತ ನರಹರಿ | ಭಯಭ್ರಾಂತಿ ವಿಲಯ || ಜಯಜಯ||೨||

ಪುಟ ೪೭ ೨೦ ರಾಗ-ಧನ್ಯಾಸಿ—ಆದಿತಾಳ (ಚಲೋಭಾಯಿ)

ಸಾಧುಗಳು—ಚಿದಾನಂದ ಹರಿಯಂಘ್ರಿಯ ಸೇವಿಸೆ |
ಸದಾನಂದವೇ ದೊರಕುವುದು || ಪ ||
ಮದಾವೇಶದಿಂ ನಡೆಯುವ ಜನರಿಗೆ |
ಸದಾ ಕ್ಲೇಶವೇ ಸಮನಿಪುದು || ಅ ||
ಶ್ರೀಭೂದೇವಿಯ ರೊಡನಾನಂದದೆ | ವೈಭವದಿಂ ಶೇಷಾಸನದಿ || ಶೋಭಿಸಿ
ಕಾಂತಿಯ ಬೀರುವ ನೀರಜ | ನಾಭನ ಪೊಗಳುತೆ ಭಕ್ತಿಯೊಳು ||೧||
ಗರುಡ ಯಕ್ಷ ಗಂಧರ್ವಾ ಮರತತಿ | ಪರಮಭಕ್ತಿಯಿಂ ಪೊಗಳುತಿರೆ ||
ಶರಣಾಗತರಿಗೆ | ವರಗಳ ನೀಡುವ | ಪರಮಾತ್ಮನ ನಾರಾಧಿಸುತೆ ||೨||

ಪುಟ ೫೨ ೨೧ ರಾಗ—ತಾಳ

ಕಬೀರ—ಪರಿಪಾಹಿ ರಾಮ ಪಾವನನಾಮ | ಪರಬಲಭೀಮ |
ಪಾಹಿ ಶ್ರೀರಾಮ | ರಘೂತ್ತಮ || ಪ ||
ರಾಮಸೀತಾ | ರಾಮಲೀಲಾ | ರಾಮರಾಕಾ | ಸೋಮವದನ ||
ರಾಮಣೀಯ | ನಾಮಮೇಘ | ಶ್ಯಾಮಪಾಹಿ ರಾಘವ ||೧||

ಪುಟ ೫೬ ೨೨ ರಾಗ—ತಾಳ

ಕಬೀರ—ಬಾಲಾ | ಮರಣವನ್ನೈದಿದೆ ||
ಲೀಲಾ ವಿಶಾಲಾ | ಬಾಲಾ ಸುಶೀಲ || ಪ ||
ಇಂದೆನ್ನಮಿತ ಸಂತೋಷನಿಧಿಯ | ಕೊಂದೆ ನಕ್ಕಟಾ ದೇವ ||೧||
ಶ್ರೀರಾಮಪದ ನೀರೇಜಗಳನು | ಸೇರಿ ನಿಂತೆಯಾ ಪುತ್ರಾ ||೨||

ಪುಟ ೫೮ ೨೩ ರಾಗ-ಹಿಂದುಸ್ತಾನಿ—ಆದಿತಾಳ

ಕಬೀರ—ಧೈರ್ಯವಿಾ ಕಾಲದಲ್ಲಿ | ಧರ್ಮ ಸುಖ ಸುಜ್ಞಾನ || ಪ ||
ಸ್ಥೈರ್ಯಮಾ ಭಕ್ತಿಯಲ್ಲಿ | ಮುಕ್ತಿಪಥ ಸಂಧಾನ || ಅ ||
ಲೋಕಮಾ ಲೋಕಿಸಲು | ಶೋಕನಿಕರಾಗಾರ | ಶ್ರೀಕರಂ ರಾಮಪದಂ

ಪ್ರಾಕಟ ಮೋಕ್ಷಾಧಾರ || ೧ || ದೇಹವೇಂ ಶಾಶ್ವತವು | ಸ್ನೇಹಬಂಧು ಬಳಗದಲಿ || ಮೋಹವಿನ್ನೇಕೆ ಮನೋ | ದಾಹಕೆ ತಾನಲ್ಲದಿರೆ || ೨ || ರಾಮ ಚಂದ್ರಾಂಘ್ರಿಯುಗ | ತಾಮರಸ ಧ್ಯಾನವದು || ಕಾಮಮೋಹಂ ಗಳ ನಿ | ರ್ನಾಮ ಗೈವುದೈ ಕಬೀರ || ೩ ||

ಪುಟ ೫೮ ೨೪ ರಾಗ-ಭೈರವಿ—ಆದಿತಾಳ

ಬೀಬಿ—ಬರಲಿಲ್ಲವು | ಪ್ರಾಣಕಾಂತನು | ಪುರವೀಧಿಯೊಳೈದಿದಾತನು || ಪ ||
ಪುರಪಾಲಕರಿಂದಲೇನು | ಪಿರಿದಪಾಯವಾಯ್ತೊ ಕಾಣೆ || ಅ ||
ಚೌರ್ಯಕೆ ನಡೆ ದೀರ್ವರಿಂದು | ತ್ವರ್ಯದಿಂದೆ ಬಾರದೆ || ಕಾರ್ಯದೆ ತಾಪವನಾಂತರೊ | ಧೈರ್ಯ ಕುಂದಿತೆನ್ನೊಳಿಂತು || ೧ ||

ಪುಟ ೫೯ ೨೫ ರಾಗ-ಪೀಲು—ಆದಿತಾಳ

ಬೀಬಿ—ಇದೇನರ್ಥವು ಹಾ | ಅಕಟ ವಿಧಿ || ಪ ||
ಜಾತನನಿಂತು | ಘಾತಿಸಿತಂದಾ | ಕೌತುಕವೇನಕಟಾ || ೧ ||
ಮೋಹದ ಪುತ್ರ | ದೇಹವನುಳಿಯ | ಲೀಹದನವದೇನೋ ! || ೨ ||

ಪುಟ ೬೧ ೨೬ ರಾಗ-ಪೂರ್ವಿಕಲ್ಯಾಣಿ—ರೂಪಕತಾಳ

ಕಬೀರ—ಮೋಹವೇನಿದೇನು ರಮಣಿ | ದೇಹದೀತೆರಂ || ಪ ||
ಶ್ರೀಹರಿಯ ವಿಲಾಸ ವೆಲ್ಲ | ವೈಹಿಕವೇಂ ಶಾಶ್ವತವೇ || ಅ ||
ಜ್ಞಾನಿಯಾಗಿ ಧರೆಯೊಳು | ಸೂನುಗಾಗಿ ಮನದೊಳು || ನೀನು ಚಿಂತಿಸುತ್ತಿರುವ ವಿ | ಧಾನವುಚಿತವಲ್ಲವು || ೧ || ತನಯ ನೀತನೆಂದು ನೀ | ನನುಚಿತಾಭಿಮಾನದಿಂದ || ಮನದೆ ನೊಂದು ಶೋಕಿಪುದು | ಘನತೆಯಲ್ಲ ಸಾಕುಸಾಕು || ೨ ||

ಪುಟ ೬೩ ೨೭ ರಾಗ-ಸುರಟಿ—ರೂಪಕತಾಳ

ಕಬೀರ—ನಿರುಕಿಪುದು ನೀಂ ರಮಣಿ | ಪರಮ ತತ್ವವ ಮನದೆ || ಅರಿತು ನಿಜವನು ಸುತನ | ಮರಣ ಕಳಲದಿರು || ಪ ||
ಜನನ ಮರಣಗಳೆಲ್ಲ | ಜನಕಜಾಪ್ತನಧೀನ || ಮನುಜರೇಂಗೈದಪರು | ಮನದಿ ನಿರುಕಿಸು ನೀಂ || ೧ ||

ಪುಟ ೭೯ ೨೮ ರಾಗ-ಕಮಾಚ್—ಆದಿತಾಳ

ರತ್ನಾಕರ—ನೀರೇ ಗಂಭೀರೇ | ಗುಣಹಾರ ಶೃಂಗಾರಿ ನೀಂ || ಪ ||
ಸಂತೋಷದಿಂ ಬಂದು | ಭ್ರಾಂತಿ ಯುಳಿದು ನಿಂದು | ಸಂತು ಸಂತಾಪ
ವನೀ | ನಂತವ ಮಾಳ್ಪುದು || ೧ || ಲೋಕೈಕ ಸಮ್ಮೋಹ | ಸಾಕಾರೆ
ಬಾರದೆ | ಏಕೆ ನೀಂ ನಿಂದೆ ಕೃಪಾ | ಲೋಕದೆ ಪಾಲಿಸು || ೨ ||

ಪುಟ ೮೮ ೨೯ ರಾಗ—ಆದಿತಾಳ

ರತ್ನಾಕರ—ಚಪಲತೆಯೇನಿದು ಚಾರುವಿಲಾಸೆ | ಕುಪಿತಳಾಗದೆ ನೀಂ
ಕೃಪೆಯನು ತೋರೆ || ಪ ||
ಕಳೆದು ವಿರೋಧವ | ತಳೆದು ವಿನೋದವ || ನಲಿಯುವ ಭಾಮಿನಿ |
ಸಲೆ ಮಧು ಮೋಹಿನಿ || ೧ ||

ಪುಟ ೯೨ ೩೦ ರಾಗ-ಶುದ್ಧಸಾವೇರಿ—ಆದಿತಾಳ

ಬೀಬಿ—ಶ್ರೀ ಗಂಗಾಲಹರೀ ವಂದಿಪೆನಾಂ || ಪ || ಯೋಗಿಸೇವ್ಯೆ ನಿಗ |
ಮಾಗಮಸನ್ನುತೆ | ಸಾಗರಗಮನೆ ಸುಖಾ | ಗಮಕಾರಣೆ || ಅ || ಶ್ರೀರ
ಮಾಧವ | ವರಚರಣ ಸ | ರೋರುಹೋದಿತೇ || ಮಾರವೈರಿ ವಿ | ಸ್ತಾರ
ದಿವ್ಯ ಕೋ | ಟೀರವಿರಾಜಿತೆ | ಸಾರಕಳಾಂಚಿತೆ ||೧|| ಜ್ಞಾನದಾಯಿನಿ |
ಮಂದಾಕಿನಿ | ದೀನಪಾಲಿನಿ || ಸೂನುವ ಶಿರವನು | ಸಾನುನಯತೆ
ಯಿಂ | ನೀ ನೊಲಿದೀವುದು | ಜಾಹ್ನವಿ ದೇವೀ || ೨ ||

ಪುಟ ೯೨ ೩೧ ರಾಗ-ತಾಳ

ಸಾಧುಗಳು—ರಾಮರಾಮ ಶ್ರೀರಾಮ | ರಾಮರಾಘವ ಸೀತಾರಾಮ ||
ರಾಮರಾಮ ಸೀತಾರಾಮ | ರಾಮ ರಾಮ ರಾಮ || ಪ || ಶೋಭಾಕರ |
ದಯಾ ಭಾಸುರ || ದೇವ ದೀನ | ಜೀವದಾನ | ಭಾವಜ್ಞಾನ ಚಿನ್ಮಯ ||
ಶ್ರೀನಾಯಕ | ನ ತೋದ್ಧಾರಕ || ಲೀಲೆಯಿಂದ | ಬಾಲನನ್ನು | ಪಾಲಿ
ಸಿಂದು ರಾಘವ || ೨ ||

ಪುಟ ೯೩ ೩೨ ರಾಗ—ಆದಿತಾಳ

ಬೀಬಿ—ಮುದ್ದು ಕುಮಾರನೆ ಬಾ | ಮುದದೊಳು | ಶುದ್ಧ ಗುಣಾಕರ
ಬಾ || ಪ || ಶ್ರೀರಘುರಾಮ ಪ | ದಾರವಿಂದ ಯುಗ | ದಾರಧನ ಮಹಿಮೆ ||

ಸಾರಗುಣಾಂಕ ಕು । ಮಾರ ಪೊರೆದುದೀ । ಮೇರೆಗೆ ನೆರೆ ನಿನ್ನ ॥ ೧ ॥
ನಂದನ ನೀನಸು । ಖಂದೆ ಕೂಡಿ ಬರ । ಲಿಂದು ಸುದಿನ ವೆಮಗೆ ॥
ಕುಂದದ ಪರಮಾ । ನಂದವು ಸಾಧುಗ । ಳಿಂದೊದಗಿದುದು ಮಿಗೆ ॥ ೨ ॥

ಪುಟ ೯೫ ೩೩ ರಾಗ-ಬೇಹಾಗ್—ಆದಿತಾಳ

ಮೂವರೂ—ರವಿಕುಲಾಂಬುಧಿ ಸೋಮ ಶ್ರೀರಾಮ । ಭವಭಯಾಪಹ ದಿವ್ಯನಾಮ ॥ ಪ ॥ ದಿವಿಜಾವಳಿಗೀತ । ಭುವನಾಧಿ ನಾಥ । ಜಿತ । ವಿವಿಧಾರಿ ಕುಲ ರಘುನಾತ ॥ ಅ ॥ ಆರಾಧಕ ಚಿತ್ತ । ನೀರೇರುಹ ಮಿತ್ರ । ಪಾರಾಶರಸ್ತುತ್ಯ । ಶ್ರೀರಾಘವ ॥ ಸಾರ ಲೀಲ । ವೈರಿಕಾಲ । ಧೀರಾವನ । ಚಾರುಶೀಲ ॥ ೧ ॥ ವಾಣೀಶ್ವರ ವಂದ್ಯ । ಕ್ಷೋಣೀಶ್ವರ ಚಂದ್ರ । ಪ್ರಾಣಪ್ರದ ಭೂತಿಸಾಂದ್ರ ॥ ತ್ರಾಣ ನಿಪುಣ । ಕ್ಷೋಣಿ ತನಯಾ । ಪ್ರಾಣಪ್ರಿಯ ರಾಮ ವಿಜಯ ॥ ೨ ॥

ಪುಟ ೧೦೨ ೩೪ ರಾಗ-ಸುರುಟಿ—ಅಟತಾಳ—ಚಾಪು

ಕಬೀರ—ಹಣವೇ ಹಣವೆ ನಿನ್ನ । ಗುಣ ವತಿಶಯವು ॥ ಪ ॥
ಹಣವಿಲ್ಲದವನೇ । ಹೆಣವು ನಿಶ್ಚಯವು ॥ ಅ ॥
ದಿಟವಾದುದ ನೆಲ್ಲ । ಸಟೆಯ ಮಾಡಿಸುವೆ । ಸಟೆಯಾದುದನೆಲ್ಲ । ಸತ್ಯವೆನಿಸುವೆ ॥ ಕುಟಿಲನಾದರೂ ಧರ್ಮ । ಪಟುವೆಂದೆನಿಸುವೆ ॥ ಕಟುಕನಾದರೂ ದಯಾ । ಕರನೆಂದೆನಿಸುವೆ ॥ ೧ ॥ ಜಾತಿಹೀನನ ಕುಲ । ಜಾತನೆಂದೆನಿಪೆ ॥ ಪಾತಕಿಯಾದರೂ । ಪಾವನ ನೆನಿಪೆ ॥ ಮಾತುಬಾರದವನ । ಮಹನೀಯ ನೆನಿಸುವೆ । ನೀತಿ ಬಾಹಿರಗೆ ವಿಖ್ಯಾತಿ ಯೆಸಗುವೆ ॥ ೨ ॥ ಅಂಧನಾದರೂ ಜಲು । ಸುಂದರ ನೆನಿಪೆ ॥ ಸುಂದರಿಯರ ಲೀಲೆಯೊಂದಿಸಿ ಕುಣಿಪೆ ॥ ನಿಂದ್ಯನಾದರೂ ಜನ । ವಂದ್ಯನೆಂದೆನಿಸುವೆ ॥ ಬಂಧನ ಬಿಡಿಸು ತಾನಂದವ ಕೊಡುವೆ ॥ ೩ ॥ ಗುಣ ವಿಲ್ಲದವನ ಸದ್ಗುಣಶಾಲಿಯೆನಿಪೆ । ತೃಣವನಾದರೂ ಚಿಂತಾ । ಮಣಿ ಯೆಂದೆನಿಪೆ ॥ ರಣಭೀರುವನು ವೀರಾಗ್ರಣಿ ಯೆಂದೆನಿಸುವೆ । ಹೆಣದಂತಿರುವನಿಗೆ ಹೆಣ್ಣ ಕೊಡಿಸುವೆ ॥ ೪ ॥ ನಾರಿಯರನು ಗೆಲ್ವ । ದಾರಿ ತೋರಿಸುವೆ । ಸಾರಶೃಂಗಾರದೊಳೂರ ತೇಲಿಸುವೆ ॥ ಮಾರಿಯ ನೀತಿ ವಿ । ಶಾರದೆ ಯೆನಿಸುವೆ । ನಾರಸಿಂಹನ ಪಾದ ಧ್ಯಾನ ಮಳಿಯುತೆ ॥ ೫ ॥

ಪುಟ ೧೦೩ ೩೫ ರಾಗ-ಸಾರಂಗ—ಝಂಪತಾಳ

ರತ್ನಾಕರ—ಹೇತೋಜನಾ ಬಾಣ | ಚಾತುರ್ಯ ವೆಂತಿಹುದು || ಪ ||
ಸೋತೀಗ ನಾಂ ಮನದೊ | ಳೀತಾಪವಂ ತಳೆದೆ || ಅ ||
ಹೃದಯ ತಾಪ ವಿದಾರೆ | ಮಧುರಾಧರವ ಪೀರೆ | ಸುದತೀ ಮಣಿಯ ಸೇರ | ಲೊದಗುವುದೆ ಸೌಭಾಗ್ಯ || ೧ || ವನಜಾಕ್ಷಿಯಂ ನೋಡಿ | ಘನ ವೈಭವಂ ಗೂಡಿ | ಮನವಾರೆ ನಲಿದಾಡಿ | ಘನ ಸೌಖ್ಯವಾಂತಪೆನೆ || ೨ ||

ಪುಟ ೧೧೦ ೩೬ ರಾಗ-ಸಾರಂಗ—ಝಂಪತಾಳ

ಕಬೀರ—ದೇಹಾಭಿಮಾನ ವಿ | ನ್ನೇಕೆ ತರುಣೀ !ನಮಗೆ | ಮೋಹಾಂಧ
ಕಾರ ವಿದು | ಮೋಸವನೆ ಗೈದಪುದು || ಪ ||
ಶ್ರೀರಾಮ ನಂಘ್ರಿಯುಗ | ನೀರೇಜಗಳನೆ ಒಲಿದು || ಆರಾಧನಂಗೈವ | ಭಾರ ವೊಂದೇ ನಮಗೆ || ೧ || ಬೋಧಕನು ಪ್ರೇರಕನು | ಸಾಧಕನು ರಾಘವನು || ಶೇದ ಮೋದಗಳಲ್ಲಿ | ಭೇದವಿಡಲಿನ್ನೇಕೆ || ೨ ||

ಪುಟ ೧೧೨ ೩೭ ರಾಗ-ಹಿಂದುಸ್ಥಾನಿ ಪೀಲು—ಏಕತಾಳ
(ಆಯಿಹೈದುನಿಯಾಮೆಹಂ)

ಕಬೀರ—ಅಹಹಾ ! ಧನಿಯಾ ಮಹಾ | ಸ್ವಾಂತ ಕಠೋರವಾದುದೇ ! ||ಪ||
ತ್ಯಾಗವಿಲ್ಲ ದಾತನ | ಭೋಗದಿಂದಲೇಂ ಫಲ ! ಭಾಗ್ಯವೆಲ್ಲ | ಭೋಗ್ಯವ ದಲ್ಲ | ಯೋಗ್ಯಮಾ ವೈ | ರಾಗ್ಯಮೊಂದೇ ||,೧ || ಈಶ್ವರಾಂಘ್ರಿ ಸೇವೆಯು | ಶಾಶ್ವತ ಸಂತೋಷವು || ನಶ್ವರ ವೀ | ಐಶ್ವರ್ಯವು | ವಿಶ್ವದಿನ್ನೇನಿರ್ಪುದು || ರಕ್ತಿ ಯೇಕೆ ಭಾಗ್ಯದೆ | ಯುಕ್ತಿ ಯೇಕೆ ಕಾರ್ಯದೆ || ಭಕ್ತಿಮತ | ಮುಕ್ತಿಯ ಪಥ | ವ್ಯಕ್ತಗೈವ ಸಾಧನ || ೩ ||

ಪುಟ ೧೧೩ ೩೮ ರಾಗ-ಪೂರ್ವಿಕಲ್ಯಾಣಿ—ಏಕತಾಳ

ಕಬೀರ—ಜಯ | ರಾಮ ರಾಮ | ಗುಣ | ಧಾಮ ರಾಮ | ಶುಭ | ನಾಮ
ರಾಮ | ನಿಸ್ಸೀಮಾ || ಪ || ಜಯ | ರಾಮ ಪೂರ್ಣ | ನಿಜ |
ಕಾಮ ದಿವ್ಯ | ಮಣಿ | ದಾಮ ರಾಮ | ಜಯ ರಾಮ || ಅ ||

ಪುಟ ೧೧೫ ೪೯ ರಾಗ_ಮಧ್ಯಮಾವತಿ—ಆದಿತಾಳ
(ಭಕ್ತಿರಸಾಯನ)

ಕಬೀರ—ಕಾಯವಿದಸ್ಥಿರ ಮಾತ್ಮನಿಗೆ।
ಮಾಯಾಮಯ ಲೋಕದೊಳುಮಿಗೆ ॥ ಪ ॥
ಕನಸಿನರೀತಿಯ ಕಾಯದ ವಿಷಯದಿ। ಮನಸಿನೊಳೀಕಭಿಮಾನ॥
ಘನವಿಚಾರದಿಂ ತಿಳಿಯಲೀಪರಿ। ತನುವೆ ವಿಕಾರಕೆ ಕಾರಣ ॥೧॥
ಮೋದ ವಿಷಾದಗಳಾತ್ಮಗೆ ಜನಿಸಲು। ಸಾಧನವೀ ಕಾಯವಿದಮಯಾ॥
ವೇದಪುರುಷ ನಡಿಗೈದುವರೇಂ ಜಡ। ಮಾದ ಶರೀರವ ಲಕ್ಷಿಪರೇ ॥೨॥

ಪುಟ ೧೧೬ ೪೦ ರಾಗ—ಲಾಳ

ಬೀಬಿ—ಅನಾಥೆಯಾಗುತೆ। ಘನಾರ್ತೆಯಾಗಿಹೆ। ನನಂತಗುಣ ರಾಮ ॥ಪ॥
ಪದ। ನತಾವನ। ರಿಪು। ಹುತಾಶನ। ಕ್ಷಿತಿ। ಸುತಾಮನೋರಮಣಾ॥
ನಿಜ ಹಿತೈಷಿಣಿ। ಮುನಿ ಸತೀಮಣಿ। ಸುಖ। ತತಿಪ್ರದಾ ಪೊರೆಯೈ ॥೧॥
ತವ। ಪದಾರ್ಚನ। ಘನ। ವಿಧಾನ ದೆನ್ನೊಳು। ಮುದಾದರಂ ಜನಿಸೆ।
ಎನ್ನ। ಮನೋಹರಂ। ನುಡಿ। ದು ನೀತಿಯಂ। ಪರ। ಜನಾಂಘ್ರಿಗರ್ಪಿ
ಸಿದಂ ॥೨॥

ಪುಟ ೧೨೦ ೪೧ ರಾಗ-ಕಮಾಚ್—ಅಟತಾಳ

ರತ್ನಾಕರ—ಕಾಮಿನಿ ಬಾರೆ ನೀಂ। ಕರಿ ಗಾಮಿನಿ। ಬಾ ರಮಣೀ ॥ ಪ ॥
ಕಾಮನ ಕೇಳಿಯೊಳು। ಪ್ರೇಮವ ತೋರುತೆ ॥ ಅ ॥
ಸಾರ ಗಂಭೀರೆಯೆ। ಸಾರುತೆ ಮುದದೊಳು॥ ಮಾರನತಾಪವ। ವಾರಿಸೆ
ರಮಣೀ ॥ ೧ ॥ ಮೌನ ವಿದೇತಕೆ। ಮಾನಿನಿ ಸರಸಕೆ ॥ ನೀನೊಲಿದ್ಕೆ
ತರೆ। ಸಾನುರೆ ಕೋರಿದೆ ॥ ೨ ॥

ಪುಟ ೧೨೧ ೪೨ ರಾಗ-ಜಂಜೂಟಿ—ರೂಪಕತಾಳ

ರತ್ನಾಕರ—ಮಾತೆ ನೀಂ ಪರಿಪಾಲಿಸೇ। ಪಾತಕಿಯಾದೆನ್ನನು ॥ ಪ ॥
ಮಹಿಳಾ ಮಣೀ ನಿನ್ನ। ಮಹಿಮೆಯ ನರಿಯದೆ। ಬಹುದ್ರೋಹ
ಗೈದರೂ। ಸಹಿಸಿದೆ ಸಾಧ್ವಿಯೇ ॥ ೧ ॥ ಚರಣಾಬ್ಜದಲ್ಲಿ ನಾ। ನೆರಗುತೆ
ಬೇಡುವೆ॥ ಕರುಣದೆ ಮನ್ನಿಸಿ। ಪೊರೆವುದೀ ಪಾಪಿಯ ॥ ೨ ॥

**ಪುಟ ೧೨೩ ೪೩ ರತ್ನಾಕರ**—ದಶರಥನಂದನ ರಾಘವರಾಮು । ದಾನವ
ಭಂಜನ ಸೀತಾರಾಮು । ಕುಶಲಪ್ರದವರ ರಾಘವರಾಮು । ಕೌಸಲ್ಯಾತ್ಮಜ
ಸೀತಾರಾಮು ॥

೪೪ ರಾಗ-ಘರ್ಜು—ಆದಿತಾಳ

ಎಲ್ಲರೂ—ಶ್ರೀರಘು ನಾಯಕ ಜಯಮಂಗಳಂ ॥ ಪ ॥
ಭೂಮಿಸುತಾ ಮುಖ । ತಾಮರಸಾರ್ಕ ॥ ಕಾಮಿತ ದಾಯಕ । ಭೂಮಿಪ
ತಿಲಕ ॥ ಮಂಗಳಂ ॥ ೧ ॥ ತಾರಣಶೀಲ । ತಾರಕ ।ಮಾಲ ॥ ದಾರುಣ
ದೈತ್ಯನಿ । ದಾರಣ ನಿಪುಣ ॥ ಮಂಗಳಂ ॥ ೨ ॥ ಗಾನ ವಿನೋದ ।
ಮೌನಿ ಪ್ರಮೋದ ॥ ಆನತ ನರಹರಿ । ಜ್ಞಾನ ಪ್ರಭೋಧ ।ಮಂಗಳಂ ॥ ೩ ।

॥ ಭ ರ ತ ವಾ ಕ್ಯ ೦. ॥

ಉ॥ ಕಾಲ ಸುವೃಷ್ಟಿಯಿಂ ಸುಫಲಮಂ ತಳೆದಿರ್ಕೆ ಧರಿತ್ರಿ ಸೌಖ್ಯಸ ।
ಲ್ಲೀಲೆಯ ನಾಂತು ರಂಜಿಕೆ ಜನಂ ನವನಾಟಕ ಕಾವ್ಯಬೃಂದಮಂ ॥
ಮೇಲೆನೆ ಗೈದು ಸತ್ಕವಿಗಳಾನುಗೆ ಪೆಂಪನುದಾರ ಧರ್ಮದಿಂ ।
ಪಾಲಿಕೆ ರಾಜ್ಯಮಂ ಸುಚಿರ ಮೆಮ್ಮಯ ಕೃಷ್ಣನರೇಂದ್ರ ಚಂದ್ರಮಂ ॥

೪೪ ಕಂ॥ ಮಂಗಳ ಮಿನಕುಲ ಚಂದ್ರಾ ।
ಮಂಗಳಕರ ಭೂಸುತಾಕ್ಷ ಕ್ಕೈರವ ಚಂದ್ರಾ ॥
ಮಂಗಳ ಮುರುಗುಣ ಸಾಂದ್ರಾ ।
ಮಂಗಳಮಯ ರಾಮಚಂದ್ರ, ನತ ದಿವಿಜೇಂದ್ರಾ ॥ ೪೯ ॥

# ಮಹಾತ್ಮ ಕಬೀರದಾಸನಾಟಕಂ

ಸಂಪೂರ್ಣಂ.

---

ಕಂ॥ ಸುರುಚಿರ ದುರ್ಮುತಿ ಸಂವ ।
ತ್ಸರದೊಳ್ ಜ್ಯೇಷ್ಠಾಸಿತ ತ್ರಯೋದಶಿ ರವಿವಾ ॥
ಸಗದೊರೆದಂ ನರಹರಿ ನ ರ ।
ಹ ರಿ ದಯದೆ ಕಬೀರದಾಸ ನವನಾಟಕಮಂ ॥ ೫೦ ॥

ಶ್ರೀರಾಮ ಚಂದ್ರಾರ್ಪಣಮಸ್ತು.

ಮಂಗಳಮಸ್ತು.

---